

# ಕನ್ನಡ ವಿಶ್ವವಿದ್ಯಾಲಯ
## ಹಂಪಿ

೨೦೦೯-೧೦ನೇ ಸಾಲಿನ ಎಂ.ಫಿಲ್ ಪದವಿಯ ಪರೀಕ್ಷೆಗೆ ಸಂಬಂಧಿಸಿದಂತೆ ಕನ್ನಡ
ವಿಶ್ವವಿದ್ಯಾಲಯಕ್ಕೆ ಸಲ್ಲಿಸಲಾಗುತ್ತಿರುವ ಸಂಶೋಧನಾ ಸಂಪ್ರಬಂಧ

# "ಬಸವಣ್ಣ ಮತ್ತು ಸರ್ವಜ್ಞರ ವಚನಗಳಲ್ಲಿ ಸಾಮಾಜಿಕ ಪ್ರಜ್ಞೆ"

ನಿಬಂಧಕಾರರು

**ಜಿ.ಪ್ರಸಾದಮೂರ್ತಿ**
ಕನ್ನಡ ಎಂ.ಫಿಲ್. ವಿದ್ಯಾರ್ಥಿ (ಹಂಪಿ, ಕ.ವಿ.ವಿ)
ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

ಮಾರ್ಗದರ್ಶಕರು

**ಡಾ. ಅರ್ಶಿಯಸ್ ಸುಂದರಂ**
ವಿಶ್ರಾಂತ ಪ್ರಾಧ್ಯಾಪಕರು
ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು



ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

೨೦೦೯-೧೦



# ಕನ್ನಡ ವಿಶ್ವವಿದ್ಯಾಲಯ
## ಹಂಪಿ

೨೦೦೯–೧೦ನೇ ಸಾಲಿನ ಎಂ.ಫಿಲ್ ಪದವಿಯ ಪರೀಕ್ಷೆಗೆ ಸಂಬಂಧಿಸಿದಂತೆ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲಾಗುತ್ತಿರುವ ಸಂಶೋಧನಾ ಸಂಪ್ರಬಂಧ

# "ಬಸವಣ್ಣ ಮತ್ತು ಸರ್ವಜ್ಞರ ವಚನಗಳಲ್ಲಿ ಸಾಮಾಜಿಕ ಪ್ರಜ್ಞೆ"


ನಿಬಂಧಕಾರರು

**ಜಿ.ಪ್ರಸಾದಮೂರ್ತಿ**

ಕನ್ನಡ ಎಂ.ಫಿಲ್. ವಿದ್ಯಾರ್ಥಿ (ಹಂಪಿ, ಕ.ವಿ.ವಿ)

ಕುವೆಂಪು ವಿದ್ಯಾವರ್ಧಕ ಟ್ರಸ್ಟ್

ಜಯಲಕ್ಷ್ಮೀಪುರಂ, ಮೈಸೂರು

ಮಾರ್ಗದರ್ಶಕರು

**ಡಾ. ಆರ್ವಿಯಸ್ ಸುಂದರಂ**

ವಿಶ್ರಾಂತ ಪ್ರಾಧ್ಯಾಪಕರು

ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು



ಕುವೆಂಪು ವಿದ್ಯಾವರ್ಧಕ ಟ್ರಸ್ಟ್

ಜಯಲಕ್ಷ್ಮೀಪುರಂ, ಮೈಸೂರು





೨೦೦೯–೧೦

# ದೃಢೀಕರಣ ಪತ್ರ

೨೦೦೯-೧೦ನೇ ಸಾಲಿನಲ್ಲಿ ಕ್ರಮಸಂಖ್ಯೆ **KVTMKS-00425**ರ ಹಂಪಿ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಯ ವಿದ್ಯಾರ್ಥಿಯಾದ ಜಿ.ಪ್ರಸಾದಮೂರ್ತಿ ಅವರು ನನ್ನ ಮಾರ್ಗದರ್ಶನದಲ್ಲಿ **"ಬಸವಣ್ಣ ಮತ್ತು ಸರ್ವಜ್ಞರ ವಚನಗಳಲ್ಲಿ ಸಾಮಾಜಿಕ ಪ್ರಜ್ಞೆ"** ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ಎಂ.ಫಿಲ್. ಪದವಿಗಾಗಿ ರಚಿಸಿ ಕನ್ನಡ ವಿಶ್ವವಿದ್ಯಾಲಯಕ್ಕೆ ಒಪ್ಪಿಸಲು ಸಿದ್ಧಪಡಿಸಿದ್ದಾರೆ.

ಈ ನಿಬಂಧವನ್ನು ಈ ಹಿಂದೆ ಈ ವಿಶ್ವವಿದ್ಯಾಲಯಕ್ಕೆ ಅಥವಾ ಬೇರೆ ವಿಶ್ವವಿದ್ಯಾನಿಲಯಗಳ ಪದವಿ, ಡಿಪ್ಲೊಮೊ ಅಥವಾ ಯಾವುದೇ ಪರೀಕ್ಷೆಗಾಗಿ ಸಲ್ಲಿಸಿಲ್ಲವೆಂದು ದೃಢೀಕರಿಸುತ್ತೇನೆ.

**ಮೈಸೂರು**
೧೧-೦೮-೨೦೧೦

(ಸಹಿ)
**(ಡಾ. ಆರ್ವಿಯಸ್ ಸುಂದರಂ)**
ಮಾರ್ಗದರ್ಶಕರು
ನಿವೃತ್ತ ಕನ್ನಡ ಪ್ರಾಧ್ಯಾಪಕರು
ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

# ಅಭ್ಯರ್ಥಿಯ ಘೋಷಣಾ ಪತ್ರ

"ಬಸವಣ್ಣ ಮತ್ತು ಸರ್ವಜ್ಞರ ವಚನಗಳಲ್ಲಿ ಸಾಮಾಜಿಕ ಪ್ರಜ್ಞೆ" ಎಂಬ ಶೀರ್ಷಿಕೆಯ ಈ ನಿಬಂಧವನ್ನು ಕನ್ನಡ ಎಂ.ಫಿಲ್. ಪದವಿಯ ಕ್ರಮಸಂಖ್ಯೆ **KVTMKS-00425**ರ ವಿದ್ಯಾರ್ಥಿಯಾದ ನಾನು ೨೦೦೯-೧೦ನೇ ಸಾಲಿನ ಪರೀಕ್ಷೆಗಾಗಿ ಡಾ. ಆರ್ವಿಯಸ್ ಸುಂದರಂ, ನಿವೃತ್ತ ಕನ್ನಡ ಪ್ರಾಧ್ಯಾಪಕರು, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು ಅವರ ಸೂಕ್ತ ಸಲಹೆ ಮತ್ತು ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ.

ಪ್ರಸ್ತುತ ಸಂಪ್ರಬಂಧವನ್ನು ಈ ಹಿಂದೆ ಈ ವಿಶ್ವವಿದ್ಯಾಲಯಕ್ಕೆ ಅಥವಾ ಬೇರೆ ವಿಶ್ವವಿದ್ಯಾನಿಲಯಗಳ ಪದವಿ, ಡಿಪ್ಲೊಮೊ ಅಥವಾ ಯಾವುದೇ ಪರೀಕ್ಷೆಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

**ಮೈಸೂರು**
ದಿನಾಂಕ: ೧೮-೦೮-೨೦೧೦

ಜಿ. [signature]
**(ಜಿ.ಪ್ರಸಾದಮೂರ್ತಿ)**
೨೦೦೯-೧೦ನೇ ಸಾಲಿನ ಎಂ.ಫಿಲ್ ವಿದ್ಯಾರ್ಥಿ
ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

"ಬಸವಣ್ಣ ಮತ್ತು ಸರ್ವಜ್ಞರ ವಚನಗಳಲ್ಲಿ ಸಾಮಾಜಿಕ ಪ್ರಜ್ಞೆ"

# ಪರಿವಿಡಿ



***

## ಅಧ್ಯಾಯ – ೧

# ಅಧ್ಯಯನದ ಸ್ವರೂಪ ಮತ್ತು ಉದ್ದೇಶ

ಎರಡು ಸಾವಿರ. ವರ್ಷಗಳಿಗೂ ಮಿಗಿಲಾದ ಇತಿಹಾಸವುಳ್ಳ ಕನ್ನಡ ಸಾಹಿತ್ಯವು ಭಾರತೀಯ ಸಾಹಿತ್ಯ ಸಂದರ್ಭದಲ್ಲಿ ತನ್ನದೇ ಆದ ನೆಲೆ ಬೆಲೆ ವೈಶಿಷ್ಟ್ಯಗಳೊಡನೆ ಮುನ್ನೆಡೆದಿರುವುದು ಸರ್ವವಿದಿತ. ಪೂರ್ವದ ಹಳಗನ್ನಡ, ಹಳಗನ್ನಡ, ನಡುಗನ್ನಡ, ಹೊಸಗನ್ನಡ ಎಂಬ ನಾಲ್ಕು ಘಟ್ಟಗಳಲ್ಲಿ ಸಾಗಿರುವ ಕನ್ನಡ ಸಾಹತ್ಯದ ಕೃಷಿ ತುಂಬಾ ಹುಲುಸಾದುದಾಗಿದೆ. ಈ ನಾಲ್ಕು ಘಟ್ಟಗಳಲ್ಲಿ ಹುಟ್ಟಿಕೊಂಡ ಜೈನಸಾಹಿತ್ಯ, ವಚನಸಾಹಿತ್ಯ, ದಾಸಸಾಹಿತ್ಯ, ಜನಪದ ಸಾಹಿತ್ಯಗಳ ಕೊಡುಗೆ ಅಪಾರ, ಅನನ್ಯ. ಈ ಒಂದೊಂದೂ ಪ್ರಕಾರವೂ ತನ್ನದೇ ಆದ ರೀತಿಯಲ್ಲಿ ವಿಶಿಷ್ಟವೂ, ವೈವಿಧ್ಯವೂ ಆಗಿದ್ದು ತಮ್ಮ ಕಾಲದ ಸಾಮಾಜಿಕ ಸಂದರ್ಭಗಳಿಗೆ ತಕ್ಕಂತೆ ಸ್ಪಂದಿಸಿರುವುದನ್ನು ನಾವು ಮನಗಾಣಬಹುದಾಗಿದೆ.

"ವಚನಗಳು ಮೂಡಿಬಂದ ಕಾಲವು ಕರ್ನಾಟಕ ಸಾಂಸ್ಕೃತಿಕ ಇತಿಹಾಸದ ದೃಷ್ಟಿಯಿಂದ ತುಂಬ ಮಹತ್ವಪೂರ್ಣವಾದುದು. ಸಾಹಿತ್ಯದ ದೃಷ್ಟಿಯಿಂದಲೂ ಅತ್ಯಂತ ಮಹತ್ವದ ಮಾರ್ಪಾಡುಗಳಿಗೆ ಎಡೆಮಾಡಿ ಕೊಟ್ಟ ಕಾಲವಿದು. ಆಯಾ ಕಾಲಸ್ಥಿತಿಗನುಗುಣವಾಗಿ ಸಾಹಿತ್ಯದ ಸ್ವರೂಪವು ಮಾರ್ಪಾಡು ಹೊಂದುತ್ತದೆಂಬುದನ್ನು ನಮ್ಮ ಸಾಹಿತ್ಯೇತಿಹಾಸವನ್ನು ಪರಿಶೀಲಿಸುವುದರಿಂದ ತಿಳಿಯಬಹುದು. ಹೀಗಾಗಿ ವಚನಗಳು ತಮ್ಮ ಹಿಂದಿನ ಕಾಲದ ಬರಹಕ್ಕಿಂತ ಸಂಪೂರ್ಣ ಭಿನ್ನ ಸ್ವರೂಪವನ್ನು ಪಡೆದ ಸಾಹತ್ಯವಾಗಲೂ ಕಾರಣ ಆಗಿನ ಸಾಮಾಜಿಕ ಪರಿಸ್ಥಿತಿ ಹಾಗೂ ಸಾಮಾಜಿಕ ಆಂದೋಲನಗಳು"[೧]

ಜನಸಾಮಾನ್ಯರ ದನಿಗೆ ಶಬ್ದವನ್ನು ತುಂಬಿದ್ದು ನಮ್ಮ ವಚನಕಾರರು. ತಮ್ಮ ಕಾಲದಲ್ಲದ್ದ ರೂಢಮೂಲ ಸಮಾಜದ ವ್ಯವಸ್ಥೆಯನ್ನು ಧಿಕ್ಕರಿಸಿ ನವಸಮಾಜ ರಚನೆಯ ಆದರ್ಶವನ್ನು ಹೊಂದಿ ಕಾವ್ಯ (ವಚನ) ರಚನೆಯಲ್ಲಿ ತೊಡಗಿದರು. ರಾಜನಲ್ಲಿ ಹಿರಿಯ ಹುದ್ದೆಯನ್ನು ಪಡೆದಿದ್ದ ಬಸವಣ್ಣನಿಂದ ಹಿಡಿದು ಅಂಬಿಗನಾದ ಚೌಡಯ್ಯ, ತುರುಗಾಹಿ ರಾಮಣ್ಣ, ಮೋಳಿಗೆ ಮಾರಯ್ಯ, ವಿರಾಗಿಯಾದ ಅಲ್ಲಮ, ಸಮಾಜಿಕ ನಿರ್ಬಂಧಗಳನ್ನೆಲ್ಲ ಕೆಚ್ಚೆದೆಯಿಂದ ಕಳಚಿ ಬಂದು ಸ್ವಾತಂತ್ರ್ಯವನ್ನು ಮೆರೆದ ಮಹಾದೇವಿಯಕ್ಕ ಇತ್ಯಾದಿ ವಿವಿಧ ಸಾಮಾಜಿಕ ಸ್ತರಕ್ಕೆ ಸೇರಿದ ವಿವಿಧ ವೃತ್ತಿಗಳನ್ನು

---

೧. ಕನ್ನಡ ಸಾಹಿತ್ಯ ಚರಿತ್ರೆ; ಸಂಪುಟ ೨, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಪುಟ ೩೧.

ಅವಲಂಬಿಸಿದ ಅನೇಕ ಮನೋಭಾವದ ಜನರೆಲ್ಲ ವಚನ ರಚನೆಯಲ್ಲಿ ತೊಡಗಿದ್ದುದರಿಂದ ಇಡೀ ವಚನ ಸಾಹಿತ್ಯವನ್ನು ಗಮನಸಿದರೆ ಆ ಕಾಲದ ಸಾಮಾನ್ಯರ ಚಿತ್ರಣ, ಅವರ ನಿಲುವುಗಳು ತಿಳಿಯುತ್ತವೆ. ಹನ್ನೆರಡನೆಯ ಶತಮಾನದ ವಚನ ಸಾಹತ್ಯವಂತೂ ಇಡೀ ವಿಶ್ವಸಾಹಿತ್ಯಕ್ಕೆ ಕನ್ನಡ ಸಾಹಿತ್ಯವು ನೀಡಿರುವ ಕೊಡುಗೆಯಾಗಿದೆ. ಸಾರ್ವಕಾಲಿಕವೂ, ಸರ್ವಜನಾದರಣೀಯವೂ, ವಿಶ್ವಮಾನ್ಯವೂ ಆದ ವಿಚಾರಗಳನ್ನು ಬಿತ್ತರಿಸಿದ ಈ ವಚನ ಸಾಹಿತ್ಯ ಇಡೀ ವಿಶ್ವಸಾಹಿತ್ಯ ಸಂದರ್ಭದಲ್ಲಯೇ ತುಂಬಾ ವಿಶಿಷ್ಟವೂ, ವಿಭಿನ್ನವೂ ಆದುದಾಗಿದೆ. ಅಂದಿನ ಶರಣರ ಪಾಲಿಗೆ ಈ ಲೋಕವೇ ಒಂದು ಉತ್ಸವಮೂರ್ತಿ ಯಾಗಿತ್ತು. ಅದನ್ನು ಪೂಜಿಸಿದಷ್ಟು, ಮೆರೆಯಿಸಿದಷ್ಟು, ಗೌರವಿಸಿದಷ್ಟು ಮೂಲಮೂರ್ತಿಯಾದ ಭಗವಂತನಿಗೆ ತೃಪ್ತಿಯಾಗುತ್ತದೆ ಎಂದು ನಂಬಿದ್ದವರು, ಅರಿತಿದ್ದವರಾಗಿದ್ದರು. ಸ್ವರ್ಗಲೋಕ ಮತ್ಯಲೋಕವೆಂಬುದು ಬರೀ ಶಬ್ದ ವ್ಯಾಮೋಹ ಅಷ್ಟೇ. ನಮ್ಮ ಕಣ್ಣಮುಂದೆ ರಾಚಿಕೊಂಡಿರುವ ಬದುಕೇ ಸರ್ವಸ್ವ, ಅದನ್ನು ಸಹ್ಯ ಸುಂದರವನ್ನಾಗಿ ಮಾಡಿಕೊಳ್ಳಬೇಕು ಎಂಬುದು ಅವರ ನಿಲುವು ಆಗಿತ್ತು. ಹಾಗಾಗಿ ಅವರು ಸಾಹಿತ್ಯವನ್ನು ಬರೆಯಬೇಕೆಂದು ಬರೆದವರಲ್ಲ. ಆ ಕಾರಣದಿಂದಲೇ ಅವರ ಸಾಹಿತ್ಯಕ್ಕೆ ಸಾಮಾಜಿಕ ಬದ್ಧತೆ ಇತ್ತು. ಮಾನವೀಯ ಕಾಳಜಿಯ ಸ್ಪರ್ಶವಿತ್ತು ಎನ್ನುವುದನ್ನು ನಾವು ಮರೆಯುವಂತಿಲ್ಲ. ನಿಜ ಹೇಳಬೇಕೆಂದರೆ ಅವರು ಲೋಕಕಲ್ಯಾಣದಲ್ಲಿ ಆತ್ಮಕಲ್ಯಾಣ ಬಯಸಿದ ಮಹಾನುಭಾವರು. ಅವರದು ಕೇವಲ ಅನುಭವಜನ್ಯವಾದ ಸಾಹತ್ಯವಲ್ಲ, ಅದು ಅನುಭಾವ ಸಾಹಿತ್ಯ.

> ದಯವಿಲ್ಲದ ಧರ್ಮವದೇವುದಯ್ಯಾ?
> ದಯವೇ ಬೇಕು ಸಕಲ ಪ್ರಾಣಿಗಳೆಲ್ಲಿರಲ್ಲಿಯು
> ದಯವೇ ಧರ್ಮದ ಮೂಲವಯ್ಯ
> ಕೂಡಲ ಸಂಗಯ್ಯನಂತಲ್ಲದೊಲ್ಲನಯ್ಯಾ

ಎಂದು ಜನತಾ ಧರ್ಮದ ಆಶಯವನ್ನು ಸಾರಿದ ಬಸವಣ್ಣನನ್ನು ಮುಖ್ಯ-ವಾಗಿಟ್ಟುಕೊಂಡು ೧೨ನೇ ಶತಮಾನದ ಸಾಮಾಜಿಕ ಪ್ರಜ್ಞೆಯನ್ನು ಬಸವಣ್ಣನವರ ವಚನಗಳ ಮೂಲಕ ಅಧ್ಯಯನ ಮಾಡುವ ಪ್ರಯತ್ನವನ್ನು ಈ ನಿಬಂಧದಲ್ಲಿ ಮಾಡಲಾಗಿದೆ. ಅದರೊಟ್ಟಿಗೆ ವಚನ ಸಾಹತ್ಯದ ಪ್ರೇರಣೆಯಲ್ಲಿಯೇ ಬಂದ ೧೬ನೇ ಶತಮನದ ಜನತೆಯ ಕವಿ ಸರ್ವಜ್ಞನನ್ನು ಬೆಸೆಯುವಂತಹ ಪ್ರಯತ್ನವನ್ನು ಮಾಡಲಾಗಿದೆ. ಆರ್.ಸಿ.ಹಿರೇಮಠರು ಹೇಳುವ ಹಾಗೆ ವಚನಕಾರರಂತೆ ಸರ್ವಜ್ಞ ವಿಚಾರವಾದಿ, ಅನುಭಾವಿ, ಸಮಾಜ ವಿಮರ್ಶಕ ಮತ್ತು ಕ್ರಾಂತಿಕಾರಕ ಜನಸಾಮಾನ್ಯರ ಜೀವನವನ್ನು ತಿದ್ದಿ ತೀಡುವುದೇ ಅವನ ಉದ್ದೇಶ. ದಯೆ ಅವನ ಧರ್ಮವಾಗಿದೆ.

ಕಾಯಕ ವೃತ್ತಿಯಾಗಿದೆ. ಸಮಾಜದಲ್ಲಿ ಜಾತಿ-ಮತಗಳ ವೈಷಮ್ಯವನ್ನು ತೊಡೆದು-ಹಾಕಲು ಮೇಲು-ಕೀಳೆಂಬ ಭಾವನೆಯನ್ನು ಕಿತ್ತು ಬಿಸುಡಲು ನಿರಂತರ ಹೋರಾಡಿದವನು. ಶರಣ ಷಟ್‌ಸ್ಥಲ ಅಷ್ಟಾವರಣ, ಪಂಚಾಚಾರಗಳನ್ನು ಸರ್ವಜ್ಞನು ತನ್ನ ವಚನಗಳಲ್ಲಿ ಅವರ ಜೀವನ ಹಾಗು ಸಾಮಾಜಿಕ ಮೌಲ್ಯಗಳನ್ನು ತನ್ನ ವಚನಗಳಲ್ಲಿ ಪ್ರತಿಪಾದಿಸಿದ್ದಾನೆ.

ಸರ್ವಜ್ಞನ ವ್ಯಕ್ತಿತ್ವದ ಬಗ್ಗೆ ನಾವು ಹೇಳಬೇಕಾದ ಅಂಶವೊಂದಿದೆ. ೧೨ನೇ ಶತಮಾನದ ಶರಣ ಚಳವಳಿಯ ನೇತಾರನಾದ ಬಸವಣ್ಣ, ಸಮಾಜದಲ್ಲಿ ಉತ್ತಮ ಕುಲವೆನಿಸಿಕೊಂಡ ಕುಲದಲ್ಲಿ ಹುಟ್ಟಿ ಉನ್ನತಾಧಿಕಾರ ಹೊಂದಿ, ಇತರ ಸ್ಥಾನ ಮಾನಗಳನ್ನು ಅನುಭವಿಸಿ ಪ್ರಜ್ಞಾಪೂರ್ವಕವಾಗಿ ಸಮಾನತೆಯನ್ನು ತರಲು ಪ್ರಯತ್ನಿಸಿದನು. ಸರ್ವಜ್ಞನು ಹುಟ್ಟಿನಿಂದಲೇ ಕೆಳ ಜಾತಿಯೆನಿಸಿಕೊಂಡ ಜಾತಿಯಲ್ಲಿ ಹುಟ್ಟಿ ಸಮಾಜದ ಮೇಲ್ವರ್ಗದ ದೌಷ್ಟ್ಯ ದರ್ಪಗಳನ್ನು ಕಂಡು ಉಂಡವನು. ಹಾಗಾಗಿ ಇಡೀ ಶರಣ ಚಳವಳಿಯ ಆಳ, ಅಗಲ, ಅಂತರಾಳವನ್ನೆಲ್ಲಾ ಅರಿತು ತನ್ನ ವ್ಯಕ್ತಿತ್ವವನ್ನು ರೂಪಿಸಿಕೊಂಡಿದ್ದ ಅವನಿಗೆ ಜೀವನದ ಪರಮ ಪುರುಷಾರ್ಥಗಳ, ಮೌಲ್ಯಗಳ ಸ್ಪಷ್ಟ ಅರಿವು ಇದ್ದಿತು.

ಈ ಹಿನ್ನೆಲೆಯಲ್ಲಿ ಪ್ರಸ್ತುತ ನಿಬಂಧವು ಒಟ್ಟು ೭ ಅಧ್ಯಾಯಗಳನ್ನು ಒಳಗೊಂಡಿದೆ. ಮೊದಲ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿಯನ್ನು ತಿಳಿಸಲಾಗಿದೆ. ಎರಡನೇ ಅಧ್ಯಾಯದಲ್ಲಿ ಹನ್ನೆರಡನೇ ಶತಮಾನದ ಸಾಹಿತ್ಯದ ಸಂದರ್ಭ ರಾಜಕೀಯ, ಸಾಮಾಜಿಕ ಸನ್ನಿವೇಶಗಳನ್ನು ತಿಳಿಸಲಾಗಿದೆ. ಮೂರನೇ ಅಧ್ಯಾಯದಲ್ಲಿ ಬಸವಣ್ಣನ ಆಯ್ದ ವಚನಗಳಲ್ಲಿ ಸಾಮಾಜಿಕ ಪ್ರಜ್ಞೆಯನ್ನು, ನಾಲ್ಕನೇ ಅಧ್ಯಾಯದಲ್ಲಿ ವಚನಕಾರರ ಅನಂತರದ ಸಾಹಿತ್ಯದ ಸಂದರ್ಭವನ್ನು ಕಟ್ಟಿಕೊಡುವ ಪ್ರಯತ್ನ ಮಾಡಲಾಗಿದೆ. ಐದನೇ ಅಧ್ಯಾಯವು ಸರ್ವಜ್ಞನ ತ್ರಿಪದಿಗಳಲ್ಲಿ ಸಾಮಾಜಿಕ ಪ್ರಜ್ಞೆಯನ್ನು ತಿಳಿಸುತ್ತದೆ. ಆರನೇ ಅಧ್ಯಾಯವು ಬಸವಣ್ಣ-ಸರ್ವಜ್ಞರ ವಚನಗಳಲ್ಲಿ ವ್ಯಕ್ತವಾಗಿರುವ ಸಾಮಾಜಿಕ ಮೌಲ್ಯದ ತೌಲನಿಕ ವಿವೇಚನೆಯನ್ನು ನಡೆಸಲಾಗಿದೆ. ಏಳನೇ ಅಧ್ಯಾಯವು ಉಪಸಂಹಾರವನ್ನು ಒಳಗೊಂಡಿದೆ.

# ಅಧ್ಯಾಯ – ೨

# ಹನ್ನೆರಡನೇ ಶತಮಾನದ ಸಾಹಿತ್ಯದ ಸಂದರ್ಭ : ರಾಜಕೀಯ ಸಾಮಾಜಿಕ ಸನ್ನಿವೇಶ

ಒಂದು ಸಂಘಟಿತ ಹೋರಾಟವಾಗಿ ರೂಪುಗೊಳ್ಳಲು ಸಮರ್ಥವಾದ ಯಾವುದೇ ಚಳುವಳಿಗಳು ಚರಿತ್ರೆಯಲ್ಲಿ ಕೇವಲ ಧಾರ್ಮಿಕ ಚೌಕಟ್ಟಿನಲ್ಲಿ ಮಾತ್ರ ಹುಟ್ಟಿದಂಥವುಗಳಾಗಿರುವುದಿಲ್ಲ. ಆಯಾ ಕಾಲದ ಅನಿವಾರ್ಯತೆಯಿಂದಾಗಿ ಅವು ಧಾರ್ಮಿಕ ತೆರೆಯ ಹಿಂದೆ ಕೆಲಸ ಮಾಡಿದರೂ ಅವುಗಳ ಮೂಲ ನೆಲೆ ಬದುಕಿನ ಮೂಲಸೂತ್ರವಾದಂತಹ ಆರ್ಥಿಕ ಜೀವನ ಸ್ವರೂಪವನ್ನು ಅವಲಂಬಿಸಿಕೊಂಡೇ ನಡೆದಿರುತ್ತದೆ. ಈ ದೃಷ್ಟಿಯಿಂದ ವಚನಕಾರರ ಚಳುವಳಿ ಎನ್ನುವುದು ಮೇಲುನೋಟಕ್ಕೆ ಕೇವಲ ಧಾರ್ಮಿಕ ಚಟುವಟಿಕೆಯಾಗಿ ಕಂಡರೂ ಅದರ ಆಳದಲ್ಲಿ ಈ ಚಳುವಳಿ ಹುಟ್ಟುವುದಕ್ಕೆ ಕಾರಣವಾದ ಅಂಶಗಳು ಧಾರ್ಮಿಕ ಆಚರಣೆಗಳಿಗಿಂತ ಬೇರೆಯಾದವುಗಳೇ ಆಗಿವೆ.

ವಚನ ಸಾಹಿತ್ಯದ ಆರಂಭಯುಗವಾಗಲಿ ಅದರ ಅತ್ಯುನ್ನತ ಕಾಲವಾಗಲಿ ಕಲ್ಯಾಣ ಚಾಲುಕ್ಯರ ಮತ್ತು ಅವರ ಸಾಮಾಂತರಾಗಿದ್ದು ಮುಂದೆ ಕೆಲವು ಕಾಲ ತಾವೇ ಚಕ್ರವರ್ತಿಗಳಾಗಿ ಆಳಿದ ಕಲಚೂರಿಗಳ ಆಡಳಿತದ ಅವಧಿಯಲ್ಲೆ ಬರುತ್ತದೆ. ವಚನ ಸಾಹಿತ್ಯದ ಸ್ವರೂಪ ವೈಶಿಷ್ಟ್ಯಗಳನ್ನು ಆ ಕಾಲದ ರಾಜಕೀಯ, ಸಾಮಾಜಿಕ, ಸನ್ನಿವೇಶಗಳೂ ಕೂಡ ನಿರ್ಧರಿಸುತ್ತವೆ. ಕರ್ನಾಟಕ ಇತಿಹಾಸದಲ್ಲಿ ಕಲ್ಯಾಣ ಚಾಳುಕ್ಯರದು ಒಂದು ಉಜ್ವಲಯುಗ. ಅವರಲ್ಲಿ ಅತ್ಯಂತ ಪ್ರಸಿದ್ಧನಾದವನು ಚಾಳುಕ್ಯ ವಿಕ್ರಮಶಕೆಯನ್ನು ಆರಂಭಿಸದ ಆರನೇ ವಿಕ್ರಮಾದಿತ್ಯ. ಉತ್ತರ ಭಾರತದಲ್ಲಿ ಅನೇಕ ರಾಜ್ಯಗಳನ್ನು ಗೆದ್ದು ತನ್ನ ಸಾಮ್ರಾಜ್ಯವನ್ನು ವಿಸ್ತರಿಸಿದನು. ದಕ್ಷಿಣದಲ್ಲಿ ಸ್ವತಂತ್ರರಾಗಲು ಹವಣಿಸಿದ ಹೊಯ್ಸಳರನ್ನು ಸೋಲಿಸಿ ತನ್ನ ಅಧಿಕಾರದ ವ್ಯಾಪ್ತಿಯನ್ನು ದಕ್ಷಿಣ ಕರ್ನಾಟಕದಲ್ಲಿ ದೃಢಪಡಿಸಿದನು. ವಿಜ್ಞಾನೇಶ್ವರನೆಂಬ ವಿದ್ವಾಂಸ, ವಿಕ್ರಮಾದಿತ್ಯನಂತಹ ದೊರೆ, ಅವನ ರಾಜಧಾನಿ ಕಲ್ಯಾಣದಂತಹ ಪಟ್ಟಣವು ಹಿಂದೆಯೂ ಇರಲಿಲ್ಲ, ಮುಂದೆಯೂ ಇರುವುದಿಲ್ಲ ಎಂದಿದ್ದಾನೆ. ಬಿಲ್ಹಣನ ಪ್ರಕಾರ ಇವನದು 'ರಾಮರಾಜ್ಯ'ವಂತೆ. ರಾಷ್ಟ್ರಕೂಟರನ್ನು ಸೋಲಸಿ ಕಲ್ಯಾಣ ಚಾಲುಕ್ಯ ವಂಶವನ್ನು ಪುನರುತ್ಥಾನ ಮಾಡಿದ ತೈಲಪನಿಂದ ವಿಕ್ರಮಾದಿತ್ಯನವರೆಗೆ ಒಂದೇ ಸಮನಾಗಿ ಮೇಲೇರಿದ ಈ ವಂಶದ ಅದೃಷ್ಟರೇಖೆ ವಿಕ್ರಮಾದಿತ್ಯನ ಸಾವಿನ ಅನಂತರ ಕೆಳಗಿಳಿಯಲು ಆರಂಭವಾಗುತ್ತದೆ. ಈ ವಿಕ್ರಮಾದಿತ್ಯನ ಕಾಲದಲ್ಲಿದ್ದ ಕೊಂಡಗುಳಿ

ಕೇಶಿರಾಜ ಕರ್ನಾಟಕದ ಮೊದಲ ವೀರಶೈವ ಕವಿ ಎನಿಸಿಕೊಂಡಿದ್ದಾನೆ. ವಿಕ್ರಮಾದಿತ್ಯನ ಹನ್ನೆರಡು ರಾಣಿಯರಲ್ಲಿ ಒಬ್ಬಳಾದ ಚಂದಲದೇವಿಯು ನೃತ್ಯವಿದ್ಯಾಧರಿಯೆಂದು ಅಭಿನವ ಸರಸ್ವತಿಯೆಂದು, ಅಭಿನವ ಶಾರದೆಯೆಂದು ಪ್ರಖ್ಯಾತಳಾದ ಕಲಾವಿದೆ-ಯಾಗಿದ್ದಳು. ಇವಳ ಮಗ ಮೂರನೇ ಸೋಮೇಶ್ವರ ವಿದ್ವಾಂಸನಾದನೇ ಹೊರತು ದಕ್ಷ ಆಡಳಿತಗಾರನಾಗಿರಲಿಲ್ಲ. ಇವನು ಚಾಲುಕ್ಯ ಸಿಂಹಾಸನವನ್ನೇರಿದರೂ ರಾಜಕೀಯವಾಗಿ ತಂದೆಯ ಮಟ್ಟಕ್ಕೆ ಬರಲಾಗಲಿಲ್ಲ. ವೆಂಗಿ ಮಂಡಲದ ಚೋಳರು ತಮ್ಮಿಂದ ಕಿತ್ತುಕೊಂಡಿದ್ದ ಭಾಗಗಳನ್ನು ಚಾಲುಕ್ಯರಿಂದ ವಶಪಡಿಸಿಕೊಂಡರು.

ಆರನೇ ವಿಕ್ರಮಾದಿತ್ಯನ ಜೊತೆ ಸೆಣಸಾಡಿ ವಿಫಲನಾಗಿದ್ದ ಹೊಯ್ಸಳ ವಿಷ್ಣುವರ್ಧನನು ಸೋಮೇಶ್ವರನ ಚಕ್ರವರ್ತಿತ್ವವನ್ನು ಬಲವಂತದಿಂದ ಒಪ್ಪಿಕೊಳ್ಳಲೇ-ಬೇಕಾಗಿದ್ದರೂ ಸ್ವತಂತ್ರನಾಗಲೂ ಮಿಸುಕಾಡಿ ಅದರಲ್ಲಿ ಸ್ವಲ್ಪ ವಿಜಯವನ್ನು ಸಾಧಿಸಿದ್ದನು. ಈ ಸೋಮೇಶ್ವರ ಚಕ್ರವರ್ತಿ ಬಹುತೇಕ ಕಲ್ಯಾಣದಲ್ಲೇ ಇರುತ್ತ ತಂದೆಯಿಂದ ಬಂದ ರಾಜ್ಯವನ್ನನುಭವಿಸುತ್ತ ತನಗೆ ದೊರೆತ ಶಾಂತಿಯ ವೇಳೆಯನ್ನು ವಿದ್ವತ್ ಕಾರ್ಯಗಳಿಗಾಗಿ ಬಳಸಿದ 'ಸರ್ವಜ್ಞ ಚಕ್ರವರ್ತಿ' ಎಂದು ಪ್ರಸಿದ್ಧನಾದ.[೧] ಇವನ ಮಗನಾದ ಇಮ್ಮಡಿ ಜಗದೇಕಮಲ್ಲನ ಕಾಲದಲ್ಲಿ ಸುಮಾರು ೧೧೩೯-೪೯ರಲ್ಲಿ ಬಹುಶಃ ಜೇಡರ ದಾಸಿಮಯ್ಯನು ಇದ್ದದ್ದು ಇವನ ಕಾಲಕ್ಕೆ ಸಾಮಂತರಾಗಿದ್ದ ಹೊಯ್ಸಳರು ಇನ್ನೂ ಪ್ರಬಲರಾದರು. ಆದರೆ ಅದಕ್ಕಿಂತ ಮುಖ್ಯಸಂಗತಿ ಸಾಮಂತಿಕೆಯನ್ನು ಒಪ್ಪಿಕೊಂಡು ಈಗಿನ ಮಹಾರಾಷ್ಟ್ರದ ಸೊಲ್ಲಾಪುರ ಜಿಲ್ಲೆಯ ಮಂಗಳಿವೇಡೆ ಪ್ರಾಂತದಲ್ಲಿ ಆಳುತ್ತಿದ್ದ ಕಲಚೂರಿಗಳು ಪ್ರಬಲರಾಗುತ್ತ ಬಂದದ್ದು ಇವನ ಅನಂತರ ಬಂದ ಮೂರನೇ ತೈಲಪ ಅತ್ಯಂತ ದುರ್ಬಲನಾಗಿದ್ದು ಇವನ ಕಾಲದಲ್ಲೇ, ಬಿಜ್ಜಳ ಕ್ರಮೇಣ ಪ್ರಬಲನಾಗುತ್ತ ಬಂದು ಕೊನೆಗೆ ಚಕ್ರವರ್ತಿಯನ್ನೇ ಕೊಂದು ತಾನೇ ಚಕ್ರವರ್ತಿಯೆಂದು ಘೋಷಿಸಿಕೊಂಡನು. ಬಿಜ್ಜಳ ಕಲಚೂರಿ ವಂಶದವನು ಮತ್ತು ಚಾಲುಕ್ಯರ ಸಾಮಾಂತನಾಗಿದ್ದನು. ಇವನ ಅಜ್ಜನ ಕಾಲದಲ್ಲಿ ಕಲ್ಯಾಣ ಚಾಲುಕ್ಯ-ರೊಂದಿಗೆ ರಕ್ತ ಸಂಬಂಧವು ಏರ್ಪಟ್ಟಿತ್ತು. ದುರ್ಬಲ ರಾಜಕೀಯ ಸನ್ನಿವೇಶವನ್ನು ಉಪಯೋಗಿಸಿಕೊಂಡು ಬಿಜ್ಜಳ ಮೂರನೇ ತೈಲಪನನ್ನು ಕೊಂದು ತಾನೇ ಚಕ್ರವರ್ತಿಯೆಂದು ಘೋಷಿಸಿಕೊಂಡು ಕ್ರಿ.ಶ. ೧೧೬೨ರಲ್ಲಿ ಸಿಂಹಾಸನವನ್ನೇರಿ ತಾನೇ ಚಕ್ರವರ್ತಿಯಾದನು. ಸಾಮಂತನಾಗಿದ್ದ ಬಿಜ್ಜಳ ಆಳುತ್ತಿದ್ದುದು ಮಂಗಳಿ ವೇಡೆಯಲ್ಲಿ ಬಸವಣ್ಣ ಮೊದಲು ಹೋಗಿ ಭಂಡಾರಿಯಾಗಿ ಮಂಗಳಿ ವೇಡೆಯಲ್ಲಿ ಬಿಜ್ಜಳನ ಹತ್ತಿರ

---

೧. ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ, ಸಂಪುಟ ೫, ವಚನಸಾಹಿತ್ಯ, ಪುಟ ೧೭.

ಕೆಲಸಕ್ಕೆ ಸೇರಿದಾಗ ತಾನುಚಕ್ರವರ್ತಿಯಾಗುವ ಕನಸನ್ನು ಕಾಣುತ್ತಿದ್ದ ಬಲಿಷ್ಠ ಸಾಮಂತನಾಗಿದ್ದ.

ಬಿಜ್ಜಳ ತೈಲಪನನ್ನು ಕೊಂದು ಪಟ್ಟಕ್ಕೆ ಬಂದ ಮೇಲೆ ಆಡಳಿತದ ಬಿಗಿ ಕಡಿಮೆಯಾಯಿತು. ಚಾಲುಕ್ಯ ಹಿತೈಷಿಗಳು ಬೇರೆಬೇರೆ ಕಡೆ ಹೋಗಿ ಅಲ್ಲೆಲ್ಲಾ ಬಿಜ್ಜಳನ ಬಗೆಗೆ ಅತೃಪ್ತಿಯನ್ನು ಬಿತ್ತಿದರು. ಇದಕ್ಕೆ ಸಾಕ್ಷಿಯಾಗಿ ೧೧೬೨ರ ಬನವಾಸಿ ಶಾಸನ ಬಿಜ್ಜಳನ ಸೇನೆ ತಗರಟೆಯ ಮೇಲೆ ನಡೆಸಿದ ದಾಳಿಯನ್ನು ಹೇಳುತ್ತದೆ. ಇದಲ್ಲದೆ ಪ್ರಾಂತಾಧಿಕಾರಿಗಳ ಮೇಲೆ ಐದು ಅಥವಾ ನಾಲ್ಕು ಜನ ಕರಣಿಕರನ್ನಿಟ್ಟು, ಅವರು ತನ್ನ ಹಿತ ನೋಡಿಕೊಂಡು ಗೂಢಚಾರರಾಗಿರುವಂತೆ ಮಾಡಿದ್ದನು. ರಾಜ್ಯವನ್ನು ತನ್ನ ಎರಡನೇ ಮಗ ಸೋಮೇಶ್ವರನಿಗೆ ವರ್ಗಾಯಿಸಿ ಅದನ್ನು ಭದ್ರಾಮಾಡಲು ಯೋಚಿಸಿದ್ದ, ಅವನ ಆರು ಜನ ಗಂಡುಮಕ್ಕಳಲ್ಲಿ ಹಿರಿಯವನಾದ ವಜ್ರದೇವ, ಮಗ ಕರ್ಣನನ್ನು ಬಿಟ್ಟು ಸತ್ತಿದ್ದ. ಉಳಿದ ಮಕ್ಕಳಾದ ಸೋಮದೇವ, ಮಲ್ಲಿಕಾರ್ಜುನ, ಸಂಕಮ, ಅಹವಮಲ್ಲ, ಸಿಂಘಣ ಇವರಲ್ಲಿ ರಾಜ್ಯಕ್ಕಾಗಿ ಕಚ್ಚಾಟಬಿದ್ದುದಲ್ಲದೆ ಬಿಜ್ಜಳನ ತಮ್ಮ ಮೈಳಗಿಯೂ ತಿರುಗಿಬಿದ್ದಿದ್ದ ಸೋಮದೇವನನ್ನು ಗದ್ದುಗೆಗೆ ತರುವುದರ ಪೂರ್ವ ಯೋಜನೆಯೋ ಎಂಬಂತೆ ಅವನಿಗೆ ಹಿಂದೆ ತಾನು ಆಳುತ್ತಿದ್ದ ತರ್ದೆವಾಡಿಯನ್ನು ಆಳಲುಕೊಟ್ಟಿದ್ದ.

ಮೊದಲ ಮಗ ಪಟ್ಟಕ್ಕೆ ಬರಬೇಕು. ಅವನಿಲ್ಲವಾದರೆ ಅವನ ಮಗನಿಗೆ ಪಟ್ಟವನ್ನು ಕಟ್ಟಬೇಕು ಎಂಬ ಕಾರಣದಿಂದಲೊ ಅಥವಾ ಕರ್ಣನ ಹೆಸರಿನಲ್ಲಿ ತಾನೇ ಅಧಿಕಾರಗಳಿಸಬೇಕೆಂದೇ ಬಿಜ್ಜಳನನ್ನು ಅಧಿಕಾರಕ್ಕೆ ತಂದ ಕಸಪಯ್ಯ ಕರ್ಣನ ಪರವಹಿಸುತ್ತಾನೆ. ಅದಕ್ಕೆ ಎದುರಾಗಿ ಬಸವನನ್ನು ಅಧಿಕಾರದಿಂದ ಹೊರಕ್ಕೆ ಕಳುಹಿಸಿದ ಶಕ್ತಿಗಳ ಪ್ರತಿನಿಧಿಯಾಗಿ ಬ್ರಾಹ್ಮಣನವನಾದ ಮಾಧವ ಈಗ ಸೋಮೇಶ್ವರನಿಗೆ ಆಗ ಇನ್ನೂ ಅಧಿಕಾರದಲ್ಲಿದ್ದ ಬಿಜ್ಜಳನಿಗೆ ಮಂತ್ರಿ ಆಪ್ತನೂ ಆಗಿದ್ದಾನೆ. ಸೋಮದೇವ ಪಟ್ಟಕ್ಕೆ ಬಂದರೂ ರಾಜ್ಯಾಡಳಿತದ ಪ್ರಮುಖ ಸೂತ್ರಗಳು ಇನ್ನೂ ಬಿಜ್ಜಳನ ಕೈಯಲ್ಲೇ ಉಳಿದಿತ್ತು ಎಂಬುದನ್ನು ೧೧೬೮ರ ಬಳ್ಳಿಗಾವೆ ಶಾಸನ ಬಿಜ್ಜಳನನ್ನೇ ಚಕ್ರವರ್ತಿ ಬಿರುದುಗಳ ಸಹಿತ ಹೊಗಳಿ ಅವನು ರಾಜ್ಯಾಧಿಕಾರವನ್ನು ತನ್ನ ಮಗನಿಗೆ ವಹಿಸಿದನೆಂದು ಹೇಳಿ ಸೋಮದೇವನ ಪರಾಕ್ರಮವನ್ನು ಕೊಂಡಾಡುತ್ತದೆ. ರಾಜ್ಯಾಧಿಕಾರದಲ್ಲಿ ಇಷ್ಟೆಲ್ಲಾ ವೈಪರೀತ್ಯಗಳಾಗುತ್ತಿದ್ದರೂ ವಚನಕಾರರಲ್ಲಿ ಅನೇಕರಿಗೆ ನೇರವಾಗಿ ರಾಜಕೀಯದಲ್ಲಿ ಪಾಲ್ಗೊಳ್ಳುವುದು ಬೇಡವಾಗಿತ್ತು. ಆದರೆ ಅವರಲ್ಲಿಯೇ ಇದ್ದ ಅನೇಕರಿಗೆ ಬಸವನ ಕೆಲಸ ಹೋದದ್ದು ಅರಸನ ಕೊಲೆ ಇವುಗಳಿಂದ ಇವರು ಬಿಜ್ಜಳನ ವಿರೋಧವಾಗಿದ್ದರು, ಎಂಬುದೂ ಇವರು ಬಿಜ್ಜಳ ಮತ್ತು ಸೋಮದೇವರ

ವಿರೋಧಿ ಗುಂಪುಗಳ ಪರವಾಗಿದ್ದರು ಎಂಬುದಕ್ಕೆ ಸಿದ್ದರಾಮ ಚಾರಿತ್ರ್ಯದಲ್ಲಿ ರಾಘವಾಂಕ ಕರ್ಣ ಸಿದ್ದರಾಮನನ್ನು ಸಹಾಯ ಕೇಳಿದ್ದ ಎಂಬ ಅಂಶ ಸೂಚನೆಯಾಗಬಹುದೆನ್ನಿಸುತ್ತದೆ.[೧] ಬಸವನ ಅಧಿಕಾರ ತ್ಯಾಗದ ಅನಂತರ ವಚನಕಾರರ ಚಳವಳಿ ಕ್ರಿಯಾತ್ಮಕವಾಗಿ ತೀವ್ರಸ್ವರೂಪವನ್ನು ಪಡೆದಿದೆ. ಬ್ರಾಹ್ಮಣರು ಮಾಧವನ ಮೂಲಕ ಅಧಿಕಾರವನ್ನು ಪುನಃಸ್ಥಾಪಿಸಿಕೊಂಡದ್ದಲ್ಲದೆ, ಸೋಮದೇವ ಶೈವನಾಗಿಯೇ ಇದ್ದ ಮಠಗಳಿಗೆ ದತ್ತಿ ಬಿಟ್ಟಿದ್ದಾನೆ. ತೀವ್ರಗತಿಯಲ್ಲಿ ಹಬ್ಬುತ್ತಿದ್ದ ಚಳವಳಿಯನ್ನು ಹತ್ತಿಕ್ಕದೆ ಹೋದರೆ ಅದರ ಅಪಾಯವೇನೆಂಬುದನ್ನು ತಿಳಿದು ಒಬ್ಬನ ಸುತ್ತ ಅಸಂಖ್ಯಾತ ಜನ ಸುತ್ತುವರಿಯುವುದನ್ನು ನಿಯಂತ್ರಿಸಬೇಕೆಂದು ಬಿಜ್ಜಳ ಈಗ ನಿರ್ಧರಿಸಿದ. ಮಗನ ರಾಜ್ಯವನ್ನು ನಿರಾತಂಕ ಮಾಡುವ ಹೊಣೆ ಈಗ ಅವನ ಮೇಲಿತ್ತು. ಈ ಮಧ್ಯೆ ತಮಿಳುನಾಡಿನ ಶೈವರ ಕಥೆಗಳು ದಕ್ಷಿಣ ಕರ್ನಾಟಕದಲ್ಲಿ ರಾಮಾನುಜರ ಚಟುವಟಿಕೆಗಳೂ ಬಸವಾದಿಗಳಿಗೆ ಇನ್ನಷ್ಟು ಉತ್ತೇಜನವನ್ನು ಒದಗಿಸಿವೆ.

ಹನ್ನೊಂದನೇ ಶತಮಾನದ ಮಧ್ಯಭಾಗದಿಂದ ಕರ್ನಾಟಕದಲ್ಲಿ ಅದರಲ್ಲೂ ವಿಶೇಷವಾಗಿ ವಚನಕಾರರು ಹುಟ್ಟಿಬೆಳೆದ ಭಾಗದಲ್ಲಿ ಜನತೆಯ ಅದರಲ್ಲೂ ವೃತ್ತಿಗಳನ್ನು ಅವಲಂಬಿಸಿಕೊಂಡು ಬದುಕುತ್ತಿದ್ದವರ ಮೇಲೆ ಹಾಕಲಾಗಿದ್ದ ತೆರಿಗೆಗಳನ್ನು ಗಮನಿಸಿದರೆ, ವಚನಕಾರರಾಗಿ ಬಂದವರು ಬಹಳಷ್ಟು ಜನ ಕಾಯಕ ಜೀವಿಗಳೇ ಆಗಿರುವುದೇಕೆಂಬುದು ನಮಗೆ ತಿಳಿಯುತ್ತದೆ. ಈ ಕಾಲಾವಧಿಯಲ್ಲಿ ಹಾಕಲಾದ ತೆರಿಗೆಗಳನ್ನು ಗಮನಿಸಿದರೆ ಎಲ್ಲದರ ಮೇಲೂ ತೆರಿಗೆಗಳನ್ನು ವಿಧಿಸುತ್ತಿದ್ದರು. ಜನಸಾಮಾನ್ಯರ ದೃಷ್ಟಿಯಿಂದ ಭೂಮಿ, ಅಂಗಡಿ, ಮನೆ, ಅಡಿಕೆ ಇವುಗಳ ಮೇಲೆ ವರ್ಷಕ್ಕೊಮ್ಮೆ ಹಾಕುತ್ತಿದ್ದ ಸಿದ್ದಾಯವೊಂದನ್ನು ಬಿಟ್ಟರೆ ಉಳಿದವುಗಳೆಲ್ಲ ನಿರಂತರವಾಗಿ ಕೊಡಬೇಕಾಗಿದ್ದ ತೆರಿಗೆಗಳು ಅಕ್ಕಸಾಲೆ, ನಾಯಿಂದ, ಅಂಬಿಗ, ಅಗಸ, ಕಮ್ಮಾರ, ಕುಂಬಾರ ಮೊದಲಾದವರು ತೆರಿಗೆಗಳನ್ನು ಕೊಡಬೇಕಾಗಿತ್ತು. ಇವರಲ್ಲದೆ ಗಾಣದ ತೆರೆ, ನೂಲುತೆರೆ, ಮಗ್ಗದೆರೆ, ಬಣ್ಣದೆರೆ, ಕುಲುಮೆದೆರೆ ಹೀಗೆ ಎಲ್ಲ ವೃತ್ತಿಯವರೂ ತೆರಿಗೆಯನ್ನು ಕೊಡಬೇಕಾಗುತ್ತಿತ್ತು. ಉಪ್ಪು ಮಾಡುವವರ ಮೇಲೆ ಸುಂಕವಿದ್ದಿತು. ೧೧೬೦ರ ಶಾಸನವೊಂದು ದೋಣಿ, ತೆಪ್ಪಗಳಿಗೆ ಸುಂಕ ಹಾಕುತ್ತಿದ್ದನ್ನು ತಿಳಿಸುತ್ತದೆ. ತೆರಿಗೆಗಳಲ್ಲದೆ ಮದುವೆ, ಚಪ್ಪರ, ಹಸೆ, ಬಾಸಿಂಗ ಇವುಗಳಿಂದ ಹಿಡಿದು ಹುಡುಗಿ ಮೈನೆರೆದರೆ, ಒಡಲಿಟ್ಟರೆ, ತೆರಿಗೆ ಕೊಡಬೇಕಾಗಿತ್ತು. ಇವುಗಳು ಸಾಲದೆಂಬಂತೆ ಅರಸರು ದರ್ಶನ ಕೊಟ್ಟಾಗ, ರಾಣಿ ಮೆರವಣಿಗೆ ಬಂದಾಗ, ದರ್ಶನ ತೆರ ಮತ್ತು

---

೧. ವೀರಶೈವ ಧರ್ಮ ದರ್ಶನ ಸಂಪುಟ–೧, ಪ್ರಧಾನ ಸಂಪಾದಕರು: ಯು.ಆರ್.ಅನಂತ ಮೂರ್ತಿ.

ದೇವಿದೆರೆಗಳನ್ನು ರಾಜರಿಗೆ ಮಗ ಹುಟ್ಟಿದರೆ ಪುತ್ರೋತ್ಸವ ಕಾಣಿಕೆ, ಕುಮಾರನು ನಾಡಿನ ಮೇಲೆ ಬಂದರೆ ಕುಮಾರ ಕಾಣಿಕೆಯನ್ನು, ಸಿಂಹಾಸನ ಹತ್ತಿದರೆ ಸಿಂಹಾಸನರೋಹಣ ಕಾಣಿಕೆಯನ್ನು ಕೊಡಬೇಕಾಗಿತ್ತು. ಇವಿಷ್ಟು ಮಾತ್ರವಲ್ಲದೆ ಕುದುರೆ ಆನೆಗಳಿದ್ದರೂ ಅರಸನಿಗೆ ಒಪ್ಪಿಸಬೇಕಾಗುತ್ತಿತ್ತು. ಇಷ್ಟೆಲ್ಲಾ ತೆರಿಗೆಗಳು ಜನರಿಗೆ ಹೊರಲಾರದವುಗಳಾಗಿದ್ದುದು ಮಾತ್ರವಲ್ಲ ಅವುಗಳನ್ನು ಕೊಡಲಾಗದೆ ಜನರು ಊರುಗಳನ್ನು ಬಿಟ್ಟು ಹೋದ ಸಂದರ್ಭಗಳು ಶಾಸನಗಳಲ್ಲಿಯೇ ಸಿಕ್ಕುತ್ತದೆ. ಇದರ ವಿರುದ್ಧ ಪ್ರತಿಭಟಿಸಿದ ಉದಾಹರಣೆಗಳು ಶಾಸನಗಳಲ್ಲಿ ಸಿಗುತ್ತದೆ. ೧೦೭೨ರ[೧] ಕೋಲಾರ ಶಾಸನವೊಂದರಲ್ಲಿ ಎಮ್ಮೆಗಳಮೇಲೆ ಬಹಳ ಕಾಲದಿಂದಲೂ ಸುಂಕವಿಲ್ಲದ್ದರಿಂದ ಅದನ್ನು ಕೊಡುವುದಿಲ್ಲವೆಂದು ಪ್ರತಿಭಟಿಸಿದ ವಿವರಗಳಿವೆ. ಅರಸ, ಮಠ, ಅಧಿಕಾರಿ ಮತ್ತು ವ್ಯಾಪಾರಿಗಳಿಂದ ಶೋಷಿತರಾದ ವೃತ್ತಿ ಜೀವಿಗಳು ತಮ್ಮವೇ ಆದಂತಹ ಗುಂಪುಗಳನ್ನು ಹೊಂದಿದ್ದರು. ಈ ಗುಂಪುಗಳು ಜೇಡಗೊತ್ತಳ, ಕಂಚುಗಾರಗೊತ್ತಳಿ, ಚಿಪ್ಪಿಗಗೊತ್ತಳಿ, ಗಾಣ ಒಕ್ಕಲು ಎಂದು ಶಾಸನಗಳಲ್ಲಿ ಬರುತ್ತದೆ. ಇವು ಕೆಲಸವನ್ನು ಮಾಡುವವರು ಒಟ್ಟಾಗಿ ಬದುಕುವ ಗುಂಪುಗಳಾಗಿದ್ದವೆ ವಿನಹಾ, ಬೇರೆ ಯಾವುದೇ ರೀತಿಯ ಶಕ್ತಿಯನ್ನು ಹೊಂದಿರಲಿಲ್ಲ. ತಾವು ತಯಾರಿಸಿದ ವಸ್ತುಗಳ ಬೆಲೆ ನಿರ್ಧಾರದಿಂದ ಹಿಡಿದು, ವ್ಯಾಪಾರಿ ಸಮುದಾಯದ ಲಾಭಾಂಶವನ್ನು ನಿಯಂತ್ರಿಸಲು ಕೂಡ ಇವುಗಳಿಗೆ ಸಾಧ್ಯವಿರಲಿಲ್ಲ. ವ್ಯಾಪಾರಿಗಳ ಕೂಲಿ ಆಳುಗಳಂತೆ ಬಹಳ ಕಡಿಮೆ ಕೂಲಿಗೆ ಹೆಚ್ಚು ಕೆಲಸಮಾಡಬೇಕಿತ್ತು. ಅವರ ದುಡಿಮೆಯ ಬಹುಪಾಲನ್ನು ವರ್ತಕರೇ ಕಬಳಿಸಿಬಿಡುತ್ತಿದ್ದರು. ರಾಜನ ತೆರಿಗೆಗಳಿಗೆ ಮತ್ತು ವರ್ತಕರ ಶೋಷಣೆಗೆ ಸಿಕ್ಕ ಈ ಜನ, ಮಠಗಳು ಮತ್ತು ದೇವಾಲಯಗಳಿಗೂ ಸಮಾಜದ ಇಕ್ಕಟ್ಟಿಗೂ ಸಿಕ್ಕಿ, ಬಿಟ್ಟಿಕೆಲಸ ಮಾಡಬೇಕಾದ ಪರಿಸ್ಥಿತಿಯಿತ್ತು. ಇಷ್ಟೊಂದು ತೆರಿಗೆಗಳ ಭಾರದಿಂದ ಕಾಯಕಜೀವಿಗಳು ಮತ್ತದರ ಪ್ರಜೆಗಳೂ ತತ್ತರಿಸಿದ್ದರೆ ಇವರನ್ನು ಕೈಯಲ್ಲಿ ಹಿಡಿದುಕೊಂಡಿದ್ದ ವರ್ತಕರು ತುಂಬಾ ಪ್ರಭಾವಶಾಲಿ ವ್ಯಕ್ತಿಗಳಾಗಿದ್ದರು ದೇಶದ ವ್ಯಾಪಾರವನ್ನೆಲ್ಲಾ ತಮ್ಮ ಹಿಡಿತದಲ್ಲಿಟ್ಟುಕೊಂಡಿದ್ದು, ಮಾತ್ರವಲ್ಲದೆ ಇವರಲ್ಲಿ ಅನೇಕ ಶ್ರೇಣಿಗಳು ಚಿಕ್ಕ ಚಿಕ್ಕ ಸೈನ್ಯಗಳನ್ನು ಇಟ್ಟುಕೊಂಡಿದ್ದವು. ಅನೇಕ ವರ್ತಕರು ರಾಜನ ಸ್ನೇಹಿತನೂ ಆಗಿ ರಾಜಧಾನಿಯ ಮೂಲ ಸ್ತಂಭವಾಗಿದ್ದರು. ರಾಜರ ಬೆಂಬಲದಿಂದ ಇವರು ಧರ್ಮದರ್ಶಿಗಳಂತೆ ದೇವಾಲಯ, ಕೆರೆಗಳು, ಕಾನೂನು ಪಾಲನೆ ಇವುಗಳ ಉಸ್ತುವಾರಿಯನ್ನು ಮಾಡುತ್ತ ಪಟ್ಟಣಸ್ವಾಮಿಗಳು ಎನಿಸಿಕೊಂಡಿದ್ದರು.

---

೧. ವೀರಶೈವ ಧರ್ಮ ದರ್ಶನ, ಪ್ರಧಾನ ಸಂಪಾದಕರು: ಯು.ಆರ್.ಅನಂತಮೂರ್ತಿ, ಪುಟ ೨೪೩.

ಇವರು ವೃತ್ತಿಜೀವಿಗಳಿಂದ ಮೂರಕ್ಕೆ ತೆಗೆದುಕೊಂಡು, ಆರಕ್ಕೆ ಮಾರುತ್ತಿದ್ದರು. ಇದಕ್ಕಾಗಿ ಕಾಯಕ ಜೀವಿಗಳು ಇವರನ್ನು ವಿರೋಧಿಸುವ ಅವಕಾಶಕ್ಕಾಗಿ ಕಾಯುತ್ತಿದ್ದರು ಎಂಬ ಅಂಶವೂ ವ್ಯಕ್ತವಾಗುತ್ತದೆ.

ಬಸವಣ್ಣ ಮತ್ತು ಇತರ ವಚನಕಾರರು ಬ್ರಾಹ್ಮಣರನ್ನು ಮತ್ತು ಅವರು ಕಲಿಸುತ್ತಿದ್ದ ವಿದ್ಯೆಯನ್ನು ವಿರೋಧಿಸಿದ್ದು ಮಾತ್ರವಲ್ಲದೆ, ದೇವಾಲಯವನ್ನು ಅಲ್ಲಿಯೇ ಇದ್ದ ಮಠಗಳ ಗುರುಗಳನ್ನು ವಿರೋಧಿಸಿರುವುದರ ಹಿನ್ನೆಲೆಗೆ ಅನೇಕ ಕಾರಣಗಳಿದ್ದವು. ಅಗ್ರಹಾರದಲ್ಲಿ ವಾಸಿಸುತ್ತಿದ್ದ ಜನಗಳು ಬೇರೆ ಜಾತಿಯವರು ಯಾರೇ ಇದ್ದರು ಆ ಊರಿನ ರಾಜಾದಾಯವೆಲ್ಲಾ ಆ ಮಹಾಜನಗಳಾದ ಬ್ರಾಹ್ಮಣರಿಗೆ ಸೇರುತ್ತಿತ್ತು. ಅನೇಕ ಅಗ್ರಹಾರಗಳಿಗೆ ತೆರಿಗೆಗಳನ್ನು ರಾಜನು ತೆಗೆದುಹಾಕಿರುವುದನ್ನು ಶಾಸನಗಳು ಹೇಳುತ್ತವೆ. ಅದೂ ಅಲ್ಲದೆ ರಾಜರು ಅಧಿಕಾರಿಗಳು, ಶ್ರೀಮಂತರು ಮೊದಲಾದವರು ವಿದ್ಯಾಭ್ಯಾಸಕ್ಕೆ ಯಥೇಚ್ಛವಾದ ದಾನದತ್ತಿಗಳನ್ನು ಕೊಡುತ್ತಿದ್ದರು. ಅಗ್ರಹಾರಗಳು ತೆರಿಗೆ ಕೊಡಬೇಕೆಂದು ಪೀಡಿಸಿದಾಗ ಅದರ ವಿರುದ್ಧ ಹೋರಾಡಿ ಮಡಿದವರು ಒಂಬತ್ತು ಹತ್ತನೇ ಶತಮಾನಕ್ಕೆ ಸೇರಿದ ಶಾಸನಗಳಲ್ಲಿ ಕಂಡುಬರುತ್ತದೆ. ಈ ಅಗ್ರಹಾರಗಳಲ್ಲಿ ವೈದಿಕರಿಗೆ ಬೇಕಾದ ವಿದ್ಯಾಭ್ಯಾಸವನ್ನು ಕಲಿಸಲಾಗುತ್ತಿತ್ತು. ಅದು ಧಾರ್ಮಿಕ ವಿದ್ಯೆಯಾಗಿದ್ದು ಮೋಕ್ಷ ಸಾಧನೆಯ ಮಾರ್ಗದಲ್ಲಿ ಮೆಟ್ಟಿಲೆಂದು ಭಾವಿಸಲಾಗುತ್ತಿತ್ತು. ಇದರ ಹೊರಗುಳಿದ ಜನ ತಮ್ಮ ಭಾಷೆಯಲ್ಲಿ ಅವರದೇ ಆದ ಮಾತುಗಳಲ್ಲಿ ತಮ್ಮ ನೋವು ಆಶೆ-ಆಕಾಂಕ್ಷೆಗಳನ್ನು ಮುಂದೆ ವ್ಯಕ್ತಪಡಿಸಲು ಮೂಲವಾಗಿದೆ. ಅಗ್ರಹಾರಗಳು ರಾಜಕೀಯವಾಗಿ ಈ ಕಾಲದಲ್ಲಿ ಅಷ್ಟೇನೂ ಪ್ರಮುಖ ಪಾತ್ರವಹಿಸುವಂತಿರಲಿಲ್ಲ. ಹನ್ನೊಂದನೇ ಶತಮಾನದ ಮಧ್ಯಭಾಗದಿಂದ ಇಳಿಮುಖವಾದ ಜೈನಧರ್ಮದ ಜಾಗದಲ್ಲಿ ಶೈವಧರ್ಮ ಬೆಳವಣಿಗೆಯನ್ನು ಹೊಂದಿತು. ದೇವಾಲಯಗಳ ನಿರ್ಮಾಣ ವಿಚಾರದಲ್ಲಿ ವೈಷ್ಣವರು ಒಂಬತ್ತನೇ ಶತಮಾನದಲ್ಲಿ ಕಟ್ಟಿಸಿದ ಒಂದೆರಡನ್ನು ಬಿಟ್ಟರೆ ಹತ್ತರಿಂದ ಹನ್ನೆರಡನೇ ಶತಮಾನದಲ್ಲಿ ಶೈವರಿಂದ ಬಹಳಷ್ಟು ದೇವಾಲಯಗಳು ನಿರ್ಮಾಣಗೊಂಡವು. ಕಾಳಾಮುಖ-ಪಾಶುಪತ ಸಂಪ್ರದಾಯಕ್ಕೆ ಸಂಬಂಧಿಸಿದ ಈ ಶೈವರು ಉತ್ತರದಿಂದ ದಕ್ಷಿಣಕ್ಕೆ ಬಂದು ದೇವಾಲಯಗಳಲ್ಲಿ ನೆಲೆಸಿದರು. ಅಗ್ರಹಾರಗಳಂತೆಯೇ ಮಠಗಳನ್ನು ಸ್ಥಾಪಿಸಿ, ವಿದ್ಯಾಕೇಂದ್ರಗಳನ್ನಾಗಿ ಮಾಡಿದರು, ಮಠದ ಮತ್ತು ದೇವಸ್ಥಾನದ ಆಸ್ತಿಯು ಒಂದೇ ಆಗಿತ್ತು. ಈ ದೇವಾಲಯಗಳಿಗೆ ಸೇವೆ ಸಲ್ಲಿಸಲು ಜನ ಹಿಂತೆಗೆದರೆ ಅಂಥವರನ್ನು ಜಾತಿಯಿಂದ ಹೊರಹಾಕುತ್ತಿದ್ದರು. ಈ ಮಠಗಳಲ್ಲಿನ ಕೆಲವರು ಬಹಳ ಪ್ರಭಾವಶಾಲಿಗಳಾಗಿದ್ದರು. ಇವರು ರಾಜಗುರುಗಳೆಂದು ಕರೆಸಿಕೊಂಡಿದ್ದಾರೆ. ಧಾರವಾಡ ಜಿಲ್ಲೆಯ ಸೂಂಕಿ ಅಕ್ಕೇಶ್ವರ

ದೇವಾಲಯದಲ್ಲಿ ಒಂದು ಸಾವಿರ ಮಂದಿ ಕೆಲಸಗಾರರಿದ್ದು ಮಠ ಅವರನ್ನು ಸಾಕುತ್ತಿತ್ತೆಂದು ಶಾಸನ ಹೇಳುತ್ತದೆ.[೧]

ದೇವಸ್ಥಾನದ ವ್ಯವಸ್ಥೆ ಶೋಷಣೆಗೆ ಮೂಲವಾದಂತೆಯೇ ಅವ್ಯವಹಾರಗಳ ನಿರಾಕರಣವನ್ನು ತಮ್ಮ ಧ್ಯೇಯಗಳಲ್ಲಿ ಒಂದಾಗಿ ಅಂಗೀಕರಿಸಿದರು. ವಚನಕಾರರು ಪ್ರತಿಭಟನೆ ವ್ಯಕ್ತಮಾಡಿರುವ ದೇವಾಲಯಗಳು ಬೇರೆ ಯಾವುವೂ ಆಗಿರದೆ ಶೈವ ದೇವಾಲಯಗಳೇ ಆಗಿದ್ದವೆಂಬುದನ್ನು ತಿಳಿಯಬಹುದು. ಏಕೆಂದರೆ ಆ ಕಾಲಕ್ಕೆ ಶೈವೇತರವಾದ ಯಾವ ದೇವಾಲಯಗಳೂ ಪ್ರಭಾವಶಾಲಿಯಾಗಿರಲಿಲ್ಲ. ರಾಜನ ತೆರಿಗೆಗಳಿಂದ, ಮಠ ದೇವಾಲಯಗಳ ಸುಲಿಗೆಯಿಂದ, ವರ್ತಕರ ಕಪಿಮುಷ್ಟಿಯಿಂದ ತಪ್ಪಿಸಿಕೊಳ್ಳುವ ಕಾತುರ ಮೊದಲುಕಾಣಸಿದ್ದು ಕಾಯಕ ಜೀವಿಗಳಲ್ಲಿಯೇ ಈ ಕಾಯಕ ಜೀವಿಗಳ ಪ್ರತಿನಿಧಿಗಳಾಗಿ ಜೇಡರ ದಾಸಿಮಯ್ಯ, ಡೋಹರ ಕಕ್ಕಯ್ಯ ಮೊದಲಾದವರು ಕಾಣಿಸುತ್ತಾರೆ. ಕಾಯಕ ಜೀವಿಗಳ ಈ ಬಗೆಯ ಗುಂಪುಗಳಿದ್ದರಿಂದಲೇ ಅವರುಗಳು ಸುಲಭವಾಗಿ ಕಲ್ಯಾಣದಲ್ಲಿ ಬಸವಣ್ಣನ ಸುತ್ತ ಸಹಕಾರಿಯಾಯಿತು. ಬಟ್ಟೆ ನೇಯುವ ದಾಸಿಮಯ್ಯನನ್ನಾಗಲೀ ಅಥವಾ ಅವನಂಥವರನ್ನಾಗಲೀ ಶೈವರು ಒಳಗೆ ಬಿಟ್ಟುಕೊಳ್ಳುವುದು ಸಾಧ್ಯವಾಗದ ಮಾತು ದೇವಾಲಯಗಳ ಮಠಗಳಲ್ಲಿ ಕಲಿಸುತ್ತಿದ್ದ ವಿದ್ಯೆ ವೇದ ಮತ್ತು ಆತ್ಮಜ್ಞಾನದ ವಿದ್ಯೆ, ಕೀಳುಜಾತಿಯವರಾರು ಅದನ್ನು ಕಲಿಯಲು ಅರ್ಹವಾಗಿರದಿದ್ದುದರಿಂದ ಅವರು ಅಂದಂದಿನ ಜೀವನೋಪಾಯಕ್ಕೆ ದಿನನಿತ್ಯದ ಬದುಕಿಗೆ ಬೇಕಾದ ವಸ್ತುಗಳನ್ನು ಉತ್ಪಾದಿಸಿ ಬದುಕುವುದು ಅನಿವಾರ್ಯವಾಯಿತು. ವಸ್ತುಗಳ ಉತ್ಪಾದನೆಯಲ್ಲಿ ಕುಶಲತೆಯನ್ನು ತೋರಿಸುವವರೂ ಈ ಗುಂಪಿನವರೇ ಆದರು ಇಂತಹದೊಂದು ಗುಂಪಿನ ನಾಯಕತ್ವ ಜೇಡರ ದಾಸಿಮಯ್ಯನ ಮೂಲಕ ಪ್ರತಿಫಲಿತವಾಗಿ ಮಠಗಳನ್ನೇ ಬಹಿಷ್ಕರಿಸಲು ತೊಡಗಿತು. ಅದು ಬಸವಣ್ಣನ ಕಾಲದಲ್ಲಿ ಹೆಚ್ಚು ಪ್ರಮುಖವಾಗಿ ವ್ಯಕ್ತವಾಯಿತು. ವಿಷ್ಣು ಸರ್ವೋತ್ತಮತ್ವವನ್ನು ಪ್ರತಿಪಾದಿಸುವ ವೈಷ್ಣವ ಧರ್ಮವು ಬಸವಣ್ಣನಿಗಿಂತ ನೂರಾರು ವರ್ಷ ಮೊದಲೇ ಇದ್ದು, ಆ ಪೂರ್ವದ ವೈಷ್ಣವ ಪ್ರವಾಹಕ್ಕೆ ಹನ್ನೆರಡನೆಯ ಶತಮಾನದಲ್ಲಿ ತಮಿಳುನಾಡಿನ ಶ್ರೀರಾಮಾನುಜರ ಶ್ರೀ ವೈಷ್ಣವ ಧರ್ಮ ಪ್ರವಾಹವು ಬಂದು ಸಂಗಮಿಸಿತು. ವಚನಕಾರರು ಒಪ್ಪಿಕೊಂಡ ವೀರಶೈವ ಧರ್ಮವು ಶಿವಸರ್ವೋತ್ತಮತ್ವವನ್ನು ಒಪ್ಪಿ-ಕೊಂಡಿದ್ದರಿಂದ ಮೊದಲಿನಿಂದಲೂ ಇವೆರಡಕ್ಕೂ ಘರ್ಷಣೆಗಳು ನಡೆಯುತ್ತಲೇ ಇದ್ದುವು. ಶ್ರೀವೈಷ್ಣವಧರ್ಮವು ಭಕ್ತಿಯನ್ನು ಪ್ರತಿಪಾದನೆ ಮಾಡಿದರೂ,

೧. ವೀರಶೈವ ಧರ್ಮ ದರ್ಶನ, ಪ್ರಧಾನ ಸಂಪಾದಕರು: ಯು.ಆರ್.ಅನಂತಮೂರ್ತಿ, ಪುಟ ೨೪೫.

ರಾಮಾನುಜರಂತಹ ಉದಾರಹೃದಯರು ಸಾಮಾನ್ಯ ಜನರ ಬಗ್ಗೆ ಮತ್ತು ಹರಿಜನರ ಬಗ್ಗೆ ಸಹಾನುಭೂತಿಪರ ಮನೋಭಾವವನ್ನು ತೋರಿದ್ದರೂ ಶೈವಧರ್ಮಕ್ಕಿಂತ ವೈಷ್ಣವ ಧರ್ಮವು ಹೆಚ್ಚು ವೈದಿಕ ಪರವಾಗಿದ್ದುದರಿಂದಲೋ ಏನೋ ವಚನಕಾರರು ಒಟ್ಟಾರೆ ವೈಷ್ಣವ ಧರ್ಮವನ್ನು ತೀವ್ರವಾಗಿ ವಿರೋಧಿಸಿದ್ದಾರೆ. ವೈದಿಕವಾದುದನ್ನು ಖಂಡಿಸಲು ಮುಖ್ಯಕಾರಣ ಅದರ ಕರ್ಮಜಡತೆ ಮತ್ತು ಭಕ್ತಿಗೆ ಅಲ್ಲಿ ಪ್ರಾಧಾನ್ಯವಿಲ್ಲದಿರುವುದು.

ಬಸವಣ್ಣನ ಕಾಲದಲ್ಲಿ ಪ್ರಬಲವಾಗಿದ್ದ ಜೈನಧರ್ಮವು ಬಹುತೇಕ ವ್ಯಕ್ತಿಯ ಬಿಡುಗಡೆಯನ್ನು ಒತ್ತಿ ಹೇಳುವಂತಹುದಾಗಿದ್ದು, ಈ ಲೋಕದ ಜೀವನದ ಬಗ್ಗೆ ತಿರಸ್ಕಾರವನ್ನು ಬೆಳೆಸಿಕೊಳ್ಳಲು ಬೋಧಿಸುವಂತಹುದಾಗಿದ್ದು ಈ ಲೋಕದ ಜೀವನದ ಬಗ್ಗೆ ವೈರಾಗ್ಯ ಪದದ ಬಗ್ಗೆ ಅಷ್ಟೇ ತೀವ್ರವಾದ ತುಡಿತಗಳು ಜೈನಧರ್ಮದ ಪ್ರಮುಖ ಸ್ತೋತ್ರವೇನಿದ್ದರೂ ಅವನ ಮನಸ್ಸಿನ ಸಂಸ್ಕಾರಕ್ಕೆ ಹೊರತು, ಅವನ ಭಕ್ತಿಯ ಕರೆಯನ್ನು ಕೇಳಿ ಬಂದು ಉದ್ಧರಿಸುವ ಯಾವ ಶಕ್ತಿಯನ್ನು ಆ ಧರ್ಮ ಒಪ್ಪಿಕೊಳ್ಳುವುದಿಲ್ಲ.

ಈ ಎಲ್ಲ ಮತಗಳ ಹಿನ್ನೆಲೆಯಲ್ಲಿ ವಚನಕಾರರನ್ನು ನೋಡಬೇಕು ಮತ್ತು ಆ ಕಾಲದ ಸಾಮಾಜಿಕ ಪರಿಸ್ಥಿತಿಯೂ ವಚನಕಾರರ ಆಂದೋಲನಕ್ಕೆ ಸಹಕಾರಿ-ಯಾಗಿದ್ದಿತೆಂದು ಹೇಳಲು ಸಾಧ್ಯವಿದೆ. ಬಹುಹಿಂದಿನಿಂದಲೂ ಹಿಂದೂ ಸಮಾಜವು ಜಾತಿಪ್ರಧಾನವಾದುದಾಗಿ ಒಡೆದಿರುವುದು ಎಲ್ಲರಿಗೂ ತಿಳಿದಿರುವ ಸಂಗತಿ. ಜಾತಿಮುಖ್ಯವಾಗಿ ವ್ಯಕ್ತಿಯ ಹುಟ್ಟಿನಿಂದ ನಿರ್ಣೀತವಾಗಿರುತ್ತದೆ ಮತ್ತು ಒಂದು ಜಾತಿಯಲ್ಲಿ ಹುಟ್ಟಿದ ವ್ಯಕ್ತಿಗೆ ಆ ಜಾತಿಯಿಂದ ಬಿಡುಗಡೆ ಎಂಬುದಿರುವುದಿಲ್ಲ. ಜಾತಿಗಳಲ್ಲಿ ಮೇಲುಕೀಳುಗಳೆಂಬ ಒಂದು ಅನುಶ್ರೇಣಿ ನಿರ್ಮಾಣವಾಗಿ, ಒಬ್ಬ ವ್ಯಕ್ತಿ ಒಂದು ಜಾತಿಯಲ್ಲಿ ಹುಟ್ಟಿದ್ದೇ ಕಾರಣವಾಗಲು ತಾನು ಉಳಿದವರಿಗಿಂತ ಶ್ರೇಷ್ಠನೆಂದು ಭಾವಿಸಲು ಮತ್ತು ಇನ್ನೊಬ್ಬ ವ್ಯಕ್ತಿ ತಾನು ತನ್ನ ಜಾತಿಯಲ್ಲಿ ಹುಟ್ಟಿದ್ದೇ ಕಾರಣವಾಗಿ ಉಳಿದವರಿಗಿಂತ ತಾನು ಹೀನ ಎಂದು ಭಾವಿಸಲು ಅವಕಾಶವಾಗುತ್ತದೆ. ಈ ಮೇಲುಕೀಳುಗಳು ವಾಸ್ತವವಾಗಿ ಮನುಷ್ಯನಿರ್ಮಿತ ಆದರೆ ಇಲ್ಲಿ ಸ್ವಾರ್ಥದ ಭಾವನೆಗಳು ಇಣುಕಿ ಹಾಕುತ್ತವೆ. ಉದಾಹರಣೆಗೆ ಮೇಲುಜಾತಿಯವನು ತನ್ನ ಅನುಕೂಲಕ್ಕೆ ಕೆಳಜಾತಿಯವರನ್ನು ಉಪಯೋಗಿಸಿಕೊಳ್ಳಬೇಕಾದರೆ, ತಾವು ಕೀಳು ಎಂಬ ಭಾವನೆಯನ್ನು ಈ ಕೆಳಜಾತಿಯವರಲ್ಲಿ ಸುಸ್ಥಿರವಾಗಿ ಊರಬೇಕಾಗುತ್ತದೆ. ಇದಕ್ಕೆ ಒಂದೇ ಒಂದು ಮಾರ್ಗ ಮೇಲುಜಾತಿ ಮತ್ತು ಕೆಳಜಾತಿ ಎಂಬುವು ಮನುಷ್ಯ ನಿರ್ಮಾಣಗಳಲ್ಲ ದೈವ ನಿರ್ಮಾಣಗಳೆನ್ನುವ ದಂತಕತೆಯನ್ನು ಹುಟ್ಟಿಸುವುದು. ಆ ದಂತಕತೆ ಕಾಲಕಳೆದಂತೆ ಚಲಾವಣೆ ಪಡೆಯುತ್ತ ನಿಜವಾಗುತ್ತದೆ. ಆಗ ಶೋಷಣೆ ಸುಲಭವಾಗುತ್ತದೆ.

ಶೋಷಣೆ ಒಂದು ರೂಪದ್ದಾಗಿರುತ್ತದೆ ಎಂದು ಭಾವಿಸಬೇಕಾಗಿಲ್ಲ. ಮನುಷ್ಯನಿಗೆ ಸಾಮಾಜಿಕ ಸ್ಥಾನ ಅಧಿಕಾರ ಮತ್ತು ಹಣ ಇವು ಮೂರೂ ಬೇಕು. ಇವುಗಳನ್ನು ಪಡೆಯಬಯಸುವವರು ಒಂದಲ್ಲ ಒಂದು ರೀತಿಯ ಸೂಕ್ಷ್ಮವು ಕೆಲವೆಡೆ ಸ್ಪಷ್ಟವೂ ಆದ ಶೋಷಣೆಗೆ ಕೈಹಾಕುತ್ತಾರೆ. ಪ್ರಾಚೀನ ಕರ್ನಾಟಕ ಬ್ರಾಹ್ಮಣರು, ದೊರೆಗಳು ಮತ್ತು ವರ್ತಕರು. ಬ್ರಾಹ್ಮಣರಿಗೆ ಹುಟ್ಟಿನಿಂದಲೇ ಒಂದು ಸ್ಥಾನ ಲಭ್ಯವಾಗುತ್ತದೆ. ಜ್ಞಾನದ ಕೀಲಿಯನ್ನು ಹಿಡಿದಿದ್ದ ಇವರ ಸಲಹೆ, ಸೂಚನೆ ಮಾರ್ಗದರ್ಶನಗಳು ಆಳುವವರಿಗೆ ಬೇಕು. ರಾಜರು ಅವರಿಗೆ ಸಮೃದ್ಧವಾಗಿ ದತ್ತಿಗಳನ್ನು ಕೊಡುವುದರ ಮೂಲಕ ಮತ್ತು ಅವರಿಗೆ ರಾಜ್ಯದಲ್ಲಿ ಬಹುಮುಖ್ಯ ಅಧಿಕಾರಸ್ಥಾನಗಳನ್ನು ಕೊಡುವುದರ ಮೂಲಕ ಅವರ ಸಹಕಾರವನ್ನು ಗೆದ್ದುಕೊಳ್ಳುತ್ತಿದ್ದರು. ಆ ಸ್ಥಾನಗಳಲ್ಲಿದ್ದುಕೊಂಡು ರಾಜಾಶಿರ್ವಾದವನ್ನು ರಾಜ ಪ್ರಶಂಸೆಯನ್ನು ಮಾಡಿ ಬ್ರಾಹ್ಮಣರು ತಮಗೆ ದೊರೆತ ದತ್ತಿಗಳ ಸಹಾಯದಿಂದ ಜೀವಿತರನ್ನು ನಡೆಸುತ್ತಿದ್ದರು. ರಾಜ್ಯಾದಾಯದ ದೃಷ್ಟಿಯಿಂದ ವರ್ತಕರು ದೇಶದ ಬಹುಮುಖ್ಯ ಭಾಗವಾಗುತ್ತಾರೆ. ಈ ಮೂವರು ತಮ್ಮ ಸೌಲಭ್ಯವನ್ನು ಬೆಳೆಸಿಕೊಳ್ಳುವುದು ಬಹುಸಂಖ್ಯಾತರಾಗಿದ್ದ ಸಾಮಾನ್ಯ ವರ್ಗದವರಿಂದ ಕರ್ನಾಟಕದ ಸಾವಿರಾರು ಶಾಸನಗಳನ್ನು ನೋಡಿದರೆ ಅಲ್ಲೆಲ್ಲ ತುಂಬಿರುವುದು ಅಥವಾ ಎದ್ದುಕಾಣುವುದು ಮೇಲಿನ ಮೂರುವರ್ಗಗಳ ಕತೆಯೇ ಬೌದ್ಧಿಕ ಅಥವಾ ಧಾರ್ಮಿಕ ಚಟುವಟಿಕೆಗಳಿಂದ, ಅಧಿಕಾರ, ಐಶ್ವರ್ಯಗಳಿಂದ ದೂರವಾದ ಸಾಮಾನ್ಯ ಜನತೆಯು ಇರುವುದು ಯಾರಾದರೂ ಶ್ರೀಮಂತರು ದೇವಸ್ಥಾನ ಕಟ್ಟಿಸಿದರೆ ಅದಕ್ಕೆ ತಮ್ಮ ಕೈಲಾದಷ್ಟು ದತ್ತಿಕೊಡುವುದಕ್ಕೆ ದುಡಿದು ದೇಶದ ಸಂಪತ್ತನ್ನು ಹೆಚ್ಚಿಸುವುದಕ್ಕೆ ಮತ್ತು ಯುದ್ಧಗಳಲ್ಲಿ ಹೋರಾಡಿ ಸಾಯುವುದಕ್ಕೆ ಈ ಸಾಮಾನ್ಯರೇ ನಿಜವಾಗಿಯೂ ದೇಶದ ಆಸ್ತಿ ಅಥವಾ ಅವರೇ ನಿಜವಾಗಿ ದೇಶ ಆದರೆ ಅವರ ಸೌಲಭ್ಯಗಳನ್ನು ತಮ್ಮ ಸುಖಕ್ಕೆ ಹರಿಸಿಕೊಂಡ ರಾಜರ ದಂಡನಾಯಕರ ಮಂತ್ರಿಗಳ ಪುರೋಹಿತರ, ವರ್ತಕರ ಕತೆಗಳನ್ನು ದಾನ ಶಾಸನಗಳನ್ನು ಸುದೀರ್ಘವಾಗಿ ಬಣ್ಣಿಸುತ್ತವೆ. ಚಿಕ್ಕ ಚಿಕ್ಕ ಪಾಠವಿರುವ ವೀರಗಲ್ಲುಗಳಲ್ಲಿ ಸಾಮಾನ್ಯರ ಕತೆ ದೊರಕುತ್ತದೆ. ಸುಖಪಡಲು ಅವರು, ದುಡಿದು ಸಾಯಲು ಇವರು ಇದು ಅಂದಿನ ಸ್ಥಿತಿಯಾಗಿತ್ತು. ಅಲ್ಲದೆ ಇದು ಮನುಕುಲದ ಶಾಶ್ವತ ಇತಿಹಾಸವೂ ಹೌದು.

ಈ ಸಾಮಾನ್ಯ ವರ್ಗದಲ್ಲೇ ಹತ್ತಾರು ಜಾತಿಗಳು, ಉಪಜಾತಿಗಳು ಒಂದೊಂದೂ ಬೇರೆ ಬೇರೆ ಕಸುಬನ್ನು ಅವಲಂಬಿಸಿದ್ದಿತು ಮತ್ತು ಹಳ್ಳಿಗಳಲ್ಲಿ ಆಯಾ ಜಾತಿಯ ಜನ ಒಟ್ಟಿಗೆ ವಾಸಿಸುತ್ತಿದ್ದರು. ಸಾಮಾನ್ಯವಾಗಿ ವ್ಯಕ್ತಿ ತನ್ನ ಜಾತಿಯೊಂದಿಗೆ

ತನ್ನನ್ನು ತಾನು ಸಂಪೂರ್ಣವಾಗಿ ಏಕೀಕರಿಸಿಕೊಳ್ಳುತ್ತಿದ್ದರಿಂದ ತನ್ನ ಜಾತಿಗೆ ಸಾಮಾಜಿಕವಾಗಿ ದೊರೆತ ಸ್ಥಾನವನ್ನು ಅವನು ಪ್ರಶ್ನಿಸುವ ಗೋಜಿಗೆ ಹೋಗುತ್ತಿರಲಿಲ್ಲ. ತನಗೆ ಸಮೀಪದಲ್ಲೇ ನಿಂತಿರುವ ಜಾತಿಯ ಕಟ್ಟುಪಾಡು ಅದರಾಚೆ ಅಧಿಕಾರ, ಹಣ, ಧಾರ್ಮಿಕ ಬಹಿಷ್ಕಾರ, ಇವೆಲ್ಲ ಕೈಯಲ್ಲಿ ಚಾಟಿ ಹಿಡಿದು ನಿಂತಿರುವಾಗ ಪ್ರತಿಭಟಿಸಬೇಕೆನ್ನುವ ವ್ಯಕ್ತಿಯು ಮತ್ತೊಮ್ಮೆ ಯೋಚನೆ ಮಾಡುವಂತಾಗಿದೆ. ಈ ಸಾಮಾನ್ಯ ವರ್ಗದಲ್ಲೇ ಸ್ಪಷ್ಟವಾಗಿ ಎರಡು ಗುಂಪು ಒಂದು ಸ್ಪೃಶ್ಯರು; ಮತ್ತೊಂದು ಅಸ್ಪೃಶ್ಯರು ಈ ಸ್ಪೃಶ್ಯರು ಯಾವ ತುಳಿತ ಶೋಷಣೆಗಳನ್ನು ಮೇಲುವರ್ಗದಿಂದ ಅನುಭವಿಸಿದರೋ ಅದನ್ನು ಅಸ್ಪೃಶ್ಯರ ಮೇಲೆ ತೀರಿಸಿದರು. ಅವರನ್ನು ಕಡೆಗಣಿಸಿ ಊರ ಹೊರಗಿಟ್ಟು ತಾವು ಕಳೆದುಕೊಂಡಿದ್ದ ಆತ್ಮಾಭಿಮಾನದ ನಷ್ಟವನ್ನು ಆ ಮೂಲಕ ತುಂಬಿಕೊಂಡರು.

ಈ ಸಾಮಾಜಿಕ ಏಣಿಯ ಮೇಲ್ತುದಿಯಲ್ಲಿ ಬ್ರಾಹ್ಮಣರು, ತೀರ ಕೆಳಗೆ ನೆಲದಲ್ಲಿ ಹೂತು ಹೋಗಿರುವ ಭಾಗದಲ್ಲಿ ಅಸ್ಪೃಶ್ಯರು ಇದು ಆ ಕಾಲದ ಚಿತ್ರಣ. ಈ ಎರಡರ ಅಂತರದಲ್ಲಿ ಬೇರೆ ಬೇರೆ ಜಾತಿಗಳು ಆಯಾ ಜಾತಿಯಲ್ಲೇ ಶ್ರೀಮಂತರು, ಮಧ್ಯಮ ವರ್ಗದವರು, ಬಡವರು ಎಂಬ ವರ್ಗಗಳು, ಸ್ತ್ರೀ ಒಟ್ಟಾರೆ ಗಂಡಿಗಿಂತ ಕೀಳು ಎಂಬ ಸಾರ್ವತ್ರಿಕ ಭಾವನೆ ಎಲ್ಲ ಜಾತಿಗಳಿಗೂ ಸಮಾನವಾದುದಾಗಿತ್ತು. ಈ ವ್ಯವಸ್ಥೆ ಹಾಗೇ ಮುಂದುವರಿಯುವುದರಲ್ಲಿ ಮೇಲಿನವರಿಗೆ ಬಹಳ ಅನುಕೂಲಗಳಿವೆ. ಹನ್ನೊಂದನೆಯ ಶತಮಾನದವರೆಗೂ ಇದು ಮುಂದುವರಿದುಕೊಂಡು ಬಂದಿತು. ಈ ಶತಮಾನದ ಉತ್ತರಾರ್ಧದಲ್ಲಿಯೋ ಅಥವಾ ಹನ್ನೆರಡನೆಯ ಶತಮಾನದ ಪೂರ್ವಾರ್ಧದಲ್ಲಿಯೋ ಅದನ್ನು ಕೆಲವರಾದರೂ ಪ್ರತಿಭಟಿಸಿದ್ದಕ್ಕೆ ಸೂಚನೆಗಳಿವೆ. ಇದಕ್ಕೆ ಪ್ರಚೋದನೆ ಧೈರ್ಯಗಳು ಎಲ್ಲಿಂದ ಬಂದುವೆಂಬುದನ್ನು ಹೇಳುವುದು ಕಷ್ಟ. ತಮಿಳುನಾಡಿನ ಕ್ರಿ.ಶ. ೭-೮ನೆಯ ಶತಮಾನಗಳ 'ನಾಯನ್ಮಾರ್' ಎಂಬ ಶಿವಭಕ್ತರು ಕನ್ನಡಿಗರಿಗೆ ಪರಿಚಿತ-ರಾಗಿದ್ದರು. ಅವರ ಶೈವ ನಿಷ್ಠೆ, ಮಾನವತೆಯಲ್ಲಿ ಅನುಕಂಪೆ, ಸರ್ವಸಮಾನತಾ ಭಾವಗಳು ಕರ್ನಾಟಕದ ಜನಕ್ಕೆ ತಿಳಿದಿದ್ದುವು. ನಾಯನ್ಮಾರರಲ್ಲಿ ಎಲ್ಲ ಬಗೆಯ ಜನರು ಇದ್ದರು. ಉತ್ತಮ ಕುಲದವರು, ಹೀನ ಕುಲದವರು, ವಿದ್ವಾಂಸರು, ಮುಗ್ಧರು, ಅಧಿಕಾರಿಗಳು, ಸಾಮಾನ್ಯರು ಹೀಗೆ ಶಿವನನ್ನೇ ತಮ್ಮ ಜೀವಿತದ ಆದರ್ಶವನ್ನಾಗಿ ಮಾಡಿಕೊಂಡಿದ್ದ. ಅದರಲ್ಲಿ ಹಲವಾರು ಶಿವನಿಗಾಗಿ ತಮ್ಮ ಸರ್ವಸ್ವವನ್ನು ಸೂರೆಗೊಂಡವರಿದ್ದರು. ಅವರ ಪ್ರಭಾವ ಕರ್ನಾಟಕದ (ವೀರ) ಶೈವಧರ್ಮದ ಮೇಲೆ ಅಪರಿಮಿತ, ತಮಿಳುನಾಡಿನ ಚೋಳ ದೊರೆಯೊಬ್ಬ ಮಾದಿಗರ ಕುಲದ ಭಕ್ತನೊಬ್ಬನನ್ನು ಮೆರೆಸಿದ್ದು ಕರ್ನಾಟಕದವರಿಗೆ ಒಂದು ಅದ್ಭುತ ಪವಾಡದಂತೆ

ಕಂಡುಬಂದಿರಬೇಕು. ಜೊತೆಗೆ, ಭಕ್ತಿಯ ಮುಂದೆ ಅಧಿಕಾರ ಎಷ್ಟು ಕ್ಷುಲ್ಲಕ ಎಂಬುದನ್ನು ಮನವರಿಕೆ ಮಾಡಿಕೊಟ್ಟಿರಬೇಕು.

ಬಸವಪೂರ್ವಯುಗದಲ್ಲಿ ಕಂಡುಬರುವ ಪ್ರತಿಭಟನೆ ಮುಖ್ಯವಾಗಿ ಧರ್ಮಸಂಬಂಧಿಯಾದುದು. ಶಿವ ಅಥವಾ ಶಿವಭಕ್ತರಿಗೆ ಅನ್ಯಾಯ–ವಾದುದು ಕಂಡುಬಂದಾಗ ಅದಕ್ಕಾಗಿ ತೋರಿದ ಪ್ರತಿಭಟನೆಯನ್ನೇ ನಾವು ನೋಡುವುದು. ರಾಜನಿಗೆ ನಮಸ್ಕರಿಸುವುದಿಲ್ಲ. ಶಿವನಿಗೆ ನಮಸ್ಕರಿಸುತ್ತೇನೆ. ಶಿವಭಕ್ತನಾಗಿರುವ ಹೊಲೆಯ ಹೊಲೆಯ ಅಲ್ಲ, ತನ್ನಂತೆಯೇ ಶಿವಭಕ್ತ ಅವನ ಸಮಾನತೆಯನ್ನು ತಾನು ಒಪ್ಪಿಕೊಂಡಿರುವುದನ್ನು ರಾಜ ಪ್ರಶ್ನಿಸುವುದಾದರೆ ತಾನು ಊರನ್ನೇ ಬಿಡಲು ಸಿದ್ಧ– ಈ ರೀತಿಯ ಪ್ರತಿಭಟನೆಯನ್ನು ಸಾಮಾಜಿಕ ಆಂದೋಲನವೆಂದು ಕರೆಯಲಾಗದಿದ್ದರೂ, ವ್ಯಕ್ತಿ ತಾನೂ ನಂಬಿದ ಯಾವುದೋ ನಂಬಿಕೆಗಾಗಿ ಆದರ್ಶಕ್ಕಾಗಿ ಎದೆಸೆಡೆದು ನಿಲ್ಲುವ ಮತ್ತು ತನ್ನ ಸುಖದ ತ್ಯಾಗಕ್ಕೂ ಸಿದ್ಧವಾಗುವ ಛಲಗಾರಿಕೆ ಇಲ್ಲಿ ಕಾಣುತ್ತದೆ. ಹೀಗೆ ಎದೆ ಸೆಟೆದು ನಿಂತವರೆಲ್ಲ ನಮಗೆ ತಿಳಿದಮಟ್ಟಿಗೆ ಬ್ರಾಹ್ಮಣೇತರರು. ಇವರು ವ್ಯಕ್ತಿಯ ಮಟ್ಟದಲ್ಲಿ ಆರಂಭಿಸಿದ ಕಾವ್ಯವನ್ನು ಮುಂದುವರಿಸಿ, ಒಂದು ಮಹಾ ಸಾಮಾಜಿಕ ಆಂದೋಲನವನ್ನು ಯಶಸ್ವಿಗೊಳಿಸಿದವರು ವಚನಕಾರರು. ತನ್ನ ಸ್ವಾರ್ಥಸಾಧನೆಗಾಗಿ ಚಕ್ರವರ್ತಿಯನ್ನು ಕೊಂದು ಇನ್ನೊಬ್ಬ ಪಟ್ಟಕ್ಕೆ ಬಂದುದು ಬಸವ ಮೊದಲಾದವರಿಗೆ ಇನ್ನೂ ಹೆಚ್ಚಿನ ನೈತಿಕ ಸ್ಥೈರ್ಯವನ್ನು ತಂದುಕೊಟ್ಟಿತು. ಅನ್ಯಾಯವಾಗ ದೊರೆ ಪಾಪ ಕಾರ್ಯವನ್ನು ಮಾಡಲು ಹೆದರದಿರುವಾಗ ತಾವು ನ್ಯಾಯಕ್ಕಾಗಿ ಹೋರಾಡು–ವವರಾದ್ದರಿಂದ ಏಕೆ ಅಂಜಬೇಕು ಎಂಬ ಧೋರಣೆಗಳು ಸಹಜವಾಗಿಯೇ ಮೂಡುತ್ತದೆ. ಬಿಜ್ಜಳ ಅನ್ಯಾಯದಿಂದ ಪಟ್ಟಕ್ಕೆ ಬಂದದ್ದರಿಂದ ದೇಶದಲ್ಲಿ ಚಾಲುಕ್ಯರಿಗೆ ನಿಷ್ಠೆಯಿಂದಿದ್ದ ಅನೇಕರು ಅವನ ವಿರೋಧಿಗಳಾಗಿದ್ದರು. ಇದು ಬಸವ ಮೊದಲಾದವರಿಗೆ ಅನುಕೂಲಕರವಾಗಿದ್ದಿತು. ಬಸವಣ್ಣ ತನ್ನ ಸಾಮಾಜಿಕ ಆಂದೋಲನದ ವಿಷಯದಲ್ಲಿ ವಹಿಸಿದ ಒಂದು ಎಚ್ಚರ ಗಮನಾರ್ಹವಾದುದು. ಅವನು ಸೇವಕ ವೃತ್ತಿಯಲ್ಲಿದ್ದಾನೆಂದು ಇತರರು ಆಕ್ಷೆಪಿಸಿದಾಗ ತಾನು ತನಗಾಗಿಯಾಗಲಿ ತನ್ನ ಸಂಸಾರವರ್ಗಕ್ಕಾಗಲಿ ಹೀಗೆ ರಾಜನನ್ನು ಓಲೈಸುತ್ತಿಲ್ಲವೆಂದು ಸಮಾಜಕ್ಕಾಗಿ ಮಾತ್ರ ಆ ಕೆಲಸವನ್ನು ಒಪ್ಪಿಕೊಂಡಿರುವುದಾಗಿ ತನ್ನ ವೃತ್ತಿಯನ್ನು ಕೈಗೊಂಡಿರುವುದಾಗಿ ಒಂದು ವಚನದಲ್ಲಿ ಹೇಳಿಕೊಂಡಿದ್ದಾನೆ. ಒಂದು ಕಡೆ ರಾಜ ಇನ್ನೊಂದು ಕಡೆ ರಾಜಕೀಯ ಘಟನೆಗಳಿಂದ ಅತೃಪ್ತರಾದ ಪ್ರಜಾವರ್ಗ–ಬಸವಣ್ಣನಿಗೆ ಬಹಳ ಅನುಕೂಲಕರವಾದ ಪರಿಸ್ಥಿತಿ ಇದು ಸಾಮಾನ್ಯ ಜನತೆಯ ಮಟ್ಟದಲ್ಲಿ ಎಚ್ಚರವನ್ನು ಮೂಡಿಸುವ ಕಾರ್ಯವನ್ನು ಮೌನವಾಗಿ ಸಾಧಿಸುವುದು ಸಾಧ್ಯವಾಯಿತು. ಈ

ಎಚ್ಚರಿಸುವ ಕಾರ್ಯ ಮುಂದುವರಿದು ಅದು ರಾಜನ ಅಥವಾ ಇತರ ಮೇಲ್ವರ್ಗದವರ ಗಮನಕ್ಕೆ ಬರುವ ಕಾಲಕ್ಕೆ ಆ ಆಂದೋಲನ ಆರಿಸಲು ಸುಲಭವಾಗದಂತಹ ಕಿಚ್ಚಿನ ಆಕಾರವನ್ನು ತಾಳಿದ್ದಿತು. ತನ್ನ ರಾಜಕೀಯ ಕೊಲೆಯಿಂದ ಹಲವರ ದ್ವೇಷವನ್ನು ಆಗಲೇ ಕಟ್ಟಿಕೊಂಡಿದ್ದ ಬಿಜ್ಜಳ ಬಸವನನ್ನಾಗಲಿ ಅವನ ಅನುಯಾಯಿಗಳನ್ನಾಗಲಿ ದಮನ ಮಾಡಿ ಆ ವರ್ಗ ದ್ವೇಷವನ್ನು ಕಟ್ಟಿಕೊಳ್ಳಲು ಸಿದ್ಧನಿರಲಿಲ್ಲ. ಆದರೆ ಸಾಂಪ್ರದಾಯಿಕ ಸಮಾಜದ ನೇತಾರರು ಬಸವನ ಮೇಲೆ ಆರೋಪಗಳನ್ನು ಹೊರಿಸಿದಾಗ ಅದನ್ನು ಅಲಕ್ಷಿಸಿ ಅವರ ಅಸಮಾಧಾನವನ್ನು ಕಟ್ಟಿಕೊಳ್ಳುವ ಸ್ಥಿತಿಯಲ್ಲಿರಲಿಲ್ಲ. ಈ ಬಿಜ್ಜಳ ಧರ್ಮಸಂಕಟವನ್ನು ಬಸವನ ಜೀವನದಲ್ಲಿ ಬರುವ ಅನೇಕ ಘಟನೆಗಳು ರುಜುವಾತು ಪಡಿಸುತ್ತವೆ. ಒಟ್ಟಿನಲ್ಲಿ ಅವನು ಸಂಪ್ರದಾಯ ನಿಷ್ಠರ ಕಡೆಗೇ ಇದ್ದು ಅವರತ್ತ ಒಲವು ತೋರಿಸುತ್ತಿದ್ದವನಾದರೂ, ಬಸವನನ್ನು ಸಂಶಯ ದೃಷ್ಟಿಯಿಂದಲೇ ನೋಡುತ್ತಿದ್ದು ಆಗಾಗ್ಗೆ ಅಸಮಾಧಾನ ತೀವ್ರವಾದಾಗ ಅವನನ್ನು ಮಾತಿನಿಂದ ಇರಿಯುತ್ತಿದನಾದರೂ ತನ್ನ ಕೈಕೆಳಗಿನ ಒಬ್ಬ ಅಧಿಕಾರಿಯನ್ನು ಏಕೆ ತೆಗೆದುಹಾಕಲಿಲ್ಲವೆಂಬುದಕ್ಕೆ ಅವನ ಮನಸ್ಸಿನ ಡೋಲಾಯ ಮನವೋ ಅಳುಕೋ ಹಿಂಜರಿಕೆಯೋ ಕಾರಣವೆಂಬುದು ಸ್ಪಷ್ಟವಾಗಿದೆ. ಅಂದಿನ ರಾಜಕೀಯ ಪರಿಸ್ಥಿತಿ ವಚನಕಾರರ ಆಂದೋಲನಕ್ಕೆ ಸಹಾಯಕವಾಗಿಯೇ ಇತ್ತು ಇದೇ ಆಂದೋಲನ ಆರನೆಯ ವಿಕ್ರಮಾದಿತ್ಯನಂತಹ ಬಲಿಷ್ಠ ಚಕ್ರವರ್ತಿಯ ಕಾಲದಲ್ಲಿ ಯಶಸ್ವಿಯಾಗುತ್ತಿತ್ತೇ ಎಂಬ ಪ್ರಶ್ನೆಗೆ ಬಹುಶಃ ಇಲ್ಲ ಎಂಬುದೇ ಉತ್ತರವಾಗುತ್ತದೆ.

ಹೊಸ ಸಮಾಜವನ್ನು ರೂಪಿಸಬೇಕೆಂದು ಬಯಸಿದ ವಚನಕಾರರು ಅಧಿಕಾರ-ರೂಢರನ್ನೂ ಮೇಲು ಜಾತಿಯವರನ್ನೂ, ಶ್ರೀಮಂತರನ್ನೂ ಸಂಪೂರ್ಣ ಉಪೇಕ್ಷಿಸಿ ನೇರವಾಗಿ ಸಾಮಾನ್ಯ ಜನತೆಯ ಬಳಿಹೋದರು. ಅವರ ಮೌಢ್ಯವನ್ನು ತೊಡೆದು ಹಾಕಿ ಅನೇಕ ಅನಾರೋಗ್ಯಕರವಾದ ಆಚರಣೆಗಳನ್ನು ಬಿಡಿಸಿದರು. ಸಾಮಾನ್ಯರಲ್ಲಿ ಪ್ರಚಲಿತವಾಗಿರುವ ಪ್ರಾದೇಶಿಕ ದೈವಗಳ ಪೂಜೆ ಎರಡು ಬಗೆಯ ದುಷ್ಪರಿಣಾಮಗಳನ್ನು ಮೂಡಿಸಬಹುದು. ಒಂದು, ಜನತೆಯನ್ನು ಬೇರೆ ಬೇರೆ ಗುಂಪುಗಳಾಗಿ ಒಡೆಯುತ್ತದೆ. ಇನ್ನೊಂದು ಅದರಲ್ಲಿ ವಿಚಿತ್ರವಾದ ಅಥವಾ ಅಮಾನುಷವಾದ ಆಚರಣೆಗಳಿಗೆ ದಾರಿ ಮಾಡಿಕೊಡುತ್ತದೆ. ಎಷ್ಟೇ ಆದರೂ ತಾವು ಪೂಜಿಸುವ ಮಾರಿ ಮಸಣಿ ಮೈಲಾರ ಎಕ್ಕನಾತಿ, ಧೂಳಿಮಾಕಾಳ ಇತ್ಯಾದಿ ದೈವಗಳು ಕೀಳು ಎಂಬ ಭಾವನೆಯಿಂದ ತಪ್ಪಿಸಿಕೊಳ್ಳಲು ಅವರಿಂದ ಸಾಧ್ಯವೇ ಆಗುವುದಿಲ್ಲ. ಬಸವಣ್ಣ ಶಿವನೇ ದೈವ ಎಂಬುದನ್ನು ಒತ್ತಿ ಹೇಳಿ ಆ ಪ್ರಾದೇಶಿಕ ದೈವಗಳ ಪೂಜೆಯನ್ನು ಬಿಡಿಸಿದ್ದರಿಂದ ಸಾಮಾನ್ಯ ಜನತೆಯನ್ನು ಒಂದು ದೈವದ ಭಕ್ತರನ್ನಾಗಿ ಮಾಡಿ ತಾವೆಲ್ಲ ಸಮಾನರು.

ಶಿವನ ಮಕ್ಕಳು ಎಂಬ ವಿಶ್ವಾಸವನ್ನು ಅವರಲ್ಲಿ ಮೂಡಿಸಿದ. ಸಾತ್ವಿಕ ಆಚರಣೆಗಳಿಗೆ ಮಹತ್ವ ಬಂದದ್ದರಿಂದ ಬಾಯಿ ಬೀಗ, ಬೆಂಕಿತುಳಿಯುವುದು, ತಲೆಯ ಮೇಲೆ ಮಲದ ಬುಟ್ಟಿ ಹೊರುವುದು, ಇತ್ಯಾದಿ ಅನಾಗರಿಕ ಮತೀಯ ಜಾತೀಯ ಆಚರಣೆಗಳು ತಾನಾಗಿ ಅಳಿಸಿ ಹೋದವು. ಶಿವನನ್ನು ಒಪ್ಪಿಕೊಂಡಿದ್ದರಿಂದ ಆ ಜನಕ್ಕೆ ತಮ್ಮಲ್ಲಿ ಆತ್ಮವಿಶ್ವಾಸ ಮೂಡಿತು. ಶಿವ ಪ್ರಾದೇಶಿಕ ದೈವವಲ್ಲ. ಭಾರತೀಯ ದೈವ ಎಲ್ಲ ವರ್ಗದವರೂ ಪೂಜಿಸುವ ದೈವ.

ಉಳ್ಳವರು ಶಿವಾಲಯವ ಮಾಡುವರು
ನಾನೇನ ಮಾಡುವೆ ಬಡವನಯ್ಯಾ
ಎನ್ನ ಕಾಲೇ ಕಂಬ, ದೇಹವೇ ದೇಗುಲ
ಶಿರವೇ ಹೊನ್ನ ಕಲಶವಯ್ಯಾ
ಕೂಡಲಸಂಗಮದೇವಾ, ಕೇಳಯ್ಯಾ
ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ

ದೇವಸ್ಥಾನವೇನಿದ್ದರೂ 'ಉಳ್ಳವರ'ದು ಶ್ರೀಮಂತರದು. ಆದರೆ ಬಸವನ ಆಂದೋಲನ ಬಡವರಿಗಾಗಿ ಹೀಗಿರುವಾಗ ಪ್ರತಿಯೊಬ್ಬ ವ್ಯಕ್ತಿಯ ದೇಹವೇ ದೇಗುಲವಾಗಿ ಪರಿವರ್ತನೆಯಾಗಬಲ್ಲಂತಹ ಇಷ್ಟ ಲಿಂಗಧಾರಣೆಯನ್ನು ವಚನಕಾರರು ಒತ್ತಿ ಹೇಳಿದ್ದು, ಉಚಿತವಾಗಿಯೂ ಅರ್ಥಪೂರ್ಣವಾಗಿಯೂ ಇದೆ. ವ್ಯಕ್ತಿಗಳು ಸಮಾಜದಲ್ಲಿ ಬೇರೆ ಬೇರೆ ಕಾರ್ಯಭಾಗಗಳನ್ನು ವಹಿಸಿ ಯಾವುದೇ ಅಸಮಾನತೆಯ ತಿಕ್ಕಾಟವೂ ಇಲ್ಲದಂತೆ ಆಯಾ ಕರ್ತವ್ಯಗಳನ್ನೆಸಗುತ್ತ ಒಟ್ಟು ಸಮಾಜದ ಯಂತ್ರ ಸಲೀಸಾಗಿ ನಡೆಯುವುದಕ್ಕೆ 'ಪಂಚಾಚಾರದ ಕಲ್ಪನೆ ಅದ್ಭುತ ರೀತಿಯಲ್ಲಿ ಸಹಾಯಕವಾಯಿತು. ಆಂದೋಲನದ ನಾಯಕರು ಮತಾಂತರಗೊಂಡ ವ್ಯಕ್ತಿಗಳಿಗೆ ಬೋಧನೆ ಮಾಡಿ ಅವರನ್ನು ಬರಿಯ ಮತಾಂಧರನ್ನಾಗಿ ಮಾಡಿ ಮೂಲೆಗೆ ಕೂರಿಸಲಿಲ್ಲ. ಅವರಲ್ಲಿ ಸಾಮಾಜಿಕ ಪ್ರಜ್ಞೆಯನ್ನು ಬಿತ್ತಿದರು. ವ್ಯಕ್ತಿ ಹೇಗೆ ಸಾರ್ಥಕವಾಗಿ ತಾನೂ ಬದುಕಿ ಸಮಾಜವನ್ನು ಬದುಕಿಸ ಬೇಕೆಂಬುದನ್ನು ಕಲಿಸಿದರು. ಇಹ ಮತ್ತು ಪರಗಳಿಗೆ ಸಮಾನವಾದ ಸ್ಥಾನವನ್ನು ಕಲ್ಪಿಸಿ ಇಲ್ಲಿ 'ಚೆನ್ನಾಗಿ' ಬದುಕುವುದು ಪರವನ್ನು ಸಾಧಿಸಲು ಅತ್ಯುತ್ತಮ ಮಾರ್ಗವೆಂಬುದನ್ನು ಒತ್ತಿಹೇಳಿದರು.

ವಚನಗಳನ್ನು ಬರಿಯ ಸಾಹಿತ್ಯವಾಗಿ ನೋಡುವುದು ತೇಲುನೋಟವಾಗಿ ಪರಿಣಮಿಸುವ ಅಪಾಯವಿದೆ. ಅವುಗಳನ್ನು ಆ ಕಾಲದ ಸಾಮಾಜಿಕ ಪರಿಸರದಲ್ಲೇ ಇಟ್ಟು ನೋಡಬೇಕು ವಚನಗಳು ವಚನಕಾರರು ತಮ್ಮ ಪರಿಸರದೊಂದಿಗೆ ಸ್ಪಂದಿಸಿದ

ಕ್ರಿಯೆಯ ಫಲಗಳು ಅವು ಮೂಲತಃ ಪ್ರತಿಭಟನಾತ್ಮಕವಾಗಿವೆ. ಅವುಗಳ ಒಟ್ಟು ಉದ್ದೇಶ ನವಸಮಾಜವೊಂದರ ನಿರ್ಮಾಣವೇ. ವಚನಗಳ ಮೂಲಕ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ ಅವರು ಆ ಕಾಲದ ಇಡೀ ಜೀವನವನ್ನೇ ಕಲಕಿದರು, ಅವರಿಗೆ ಆಂದೋಲನವೆಂದರೆ ಹೊಸಜೀವನ, ಹೊಸ ಜೀವನವೆಂದರೆ ಜನ ಆಲೋಚಿಸುವಂತೆ ಮಾಡುವುದು.

# ಅಧ್ಯಾಯ – ೩

## ವಚನಕಾರರ ಅನಂತರದ ಸಾಹಿತ್ಯ ಸಂದರ್ಭ

ಕಲ್ಯಾಣದಲ್ಲಿ ನಡೆದ ಗಲಭೆಯ ಅನಂತರ ವಚನಕಾರರು ದೇಶದ ವಿವಿಧ ಭಾಗಗಳಿಗೆ ತೆರಳಿದರು. ಈಗಲೇ ಪ್ರಸಿದ್ಧವಾಗಿದ್ದ ಅಲ್ಲದೆ ಪ್ರಸಾರವಾಗಿದ್ದ ವಚನಗಳು ಈ ಚದುರಿದ ವಚನಕಾರರ ಮೂಲಕವು ಪಸರಿಸಿದವು. ಈ ಕಾಲಘಟ್ಟದಲ್ಲಿ ಪ್ರತಿಭಾಶಾಲಿ ಕವಿಗಳನ್ನು ನೋಡಿದರೂ ಹಿಂದಿನ ವಚನಕಾರರಂತಹ ಸಾಮಾಜಿಕ ಕ್ರಾಂತಿಕಾರರನ್ನು ಕಾಣುವುದಿಲ್ಲ. ಸಾಹಿತ್ಯದ ದೃಷ್ಟಿಯಿಂದ ನೋಡುವುದಾದರೆ ಬಸವಣ್ಣ ಮೊದಲಾದವರ ಅನಂತರವು ಇವರ ಸಮಕಾಲೀನರು ಬದುಕಿ ವಚನ ರಚನೆಯನ್ನು ಮಾಡಿದ್ದಾರೆ. ಇವರಲ್ಲಿ 'ಆದಯ್ಯ' ನಮಗೆ ಪ್ರಮುಖವಾಗಿ ಕಾಣಿಸಿಕೊಳ್ಳುತ್ತಾನೆ. 'ಆದಯ್ಯ' ಸೌರಾಷ್ಟ್ರದವನು. ವ್ಯಾಪಾರಕ್ಕಾಗಿ ದಕ್ಷಿಣದ ಪುಲಿಗೆರೆಗೆ ಬಂದು ಅಲ್ಲಿ ಜೈನ ಪಾರಿಶಪಂಡಿತನ ಮಗಳಾದ ಪದ್ಮಾವತಿಯಲ್ಲಿ ಅನುರಕ್ತನಾಗಿ ಮದುವೆಯಾದನೆಂದೂ, ಶಿವಭಕ್ತನಾಗಿದ್ದ ಇವನು ಪ್ರತಿಜ್ಞೆ ಮಾಡಿ ಸೌರಾಷ್ಟ್ರ ಸೋಮೇಶ್ವರನನ್ನು ತಂದು ಅಲ್ಲಿಯ ಬಸದಿಯಲ್ಲಿ ಪ್ರತಿಷ್ಠಾಪಿಸಿದನೆಂದೂ ಹರಿಹರ ರಾಘವಾಂಕರು ಹೇಳುತ್ತಾರೆ. ಇವನು ಬಸವಣ್ಣನ ಕಿರಿಯ ಸಮಕಾಲೀನನಾಗಿದ್ದು, ವಚನಕಾರರ ಕಾಲವಾದ ಮೇಲೆ ನಲವತ್ತು ಐವತ್ತು ವರ್ಷ ಬದುಕಿರಬಹುದೆಂದು ಉತ್ತಂಗಿಚನ್ನಪ್ಪನವರು ಊಹಿಸುತ್ತಾರೆ. ಇವನನ್ನು ಏಕಾಂತದ ರಾಮಯ್ಯ ಹೆಸರಿಸುತ್ತಾನೆ. ಇವರಿಬ್ಬರು ಸಮಕಾಲೀನರು ಮತ್ತು ಸಮಾನ ಮನೋಧರ್ಮದವರು. ಏಕಾಂತದ ರಾಮಯ್ಯನೂ ಜಿನ ವಿಗ್ರಹದ ಸ್ಥಾನದಲ್ಲಿ ಶಿವಲಿಂಗವನ್ನು ಸ್ಥಾಪಿಸಿದ್ದ, ಏಕಾಂತದ ರಾಮಯ್ಯ ಬಿಜ್ಜಳನಿಂದ ಪ್ರಶಸ್ತಿ ಪತ್ರ ಪಡೆದಂತೆ ಉಲ್ಲೇಖವಿರುವುದರಿಂದ ಅವನು ಬಸವಣ್ಣನ ಸಮಕಾಲೀನನಾಗಿದ್ದು ಬಸವ ಮಡಿದ ಬಳಿಕ ಎಷ್ಟೋ ಕಾಲ ಬದುಕಿರುವ ಸಾಧ್ಯತೆ ಇದೆ. ಇವನ ಕಥೆಯನ್ನು ಆದಯ್ಯ ಹೇಳುವುದರಿಂದ ಏಕಾಂತದ ರಾಮಯ್ಯನ ಕಿರಿಯ ಸಮಕಾಲೀನ ಆದಯ್ಯನಾಗುತ್ತಾನೆ. ಇಬ್ಬರೂ ಜೈನಧರ್ಮದ ಜೊತೆ ಸೆಣಸಿರುವ ಸಂಗತಿಯೂ ಆಗಿನ ಕಾಲದಲ್ಲಿ ನಡೆಯುತ್ತಿದ್ದ ಮತೀಯ ಘರ್ಷಣೆಗಳನ್ನು ಸೂಚಿಸುತ್ತದೆ.[೧]

---

೧. ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ, ಸಂಪುಟ ೫, ಡಾ. ಎಂ.ಚಿದಾನಂದಮೂರ್ತಿ, ಸಪ್ನಬುಕ್ ಹೌಸ್, ಬೆಂಗಳೂರು, ಪುಟ ೩೧.

ಆದಯ್ಯನ ೩೯೭ ವಚನಗಳು ಸಿಕ್ಕಿವೆ. ಸಂಸ್ಕೃತ ಶ್ಲೋಕಗಳಿಂದ ಕೂಡಿ ಪ್ರೌಢವಾಗಿರುವ ಇವನ ವಚನಗಳು ದೀರ್ಘವಾಗಿವೆ. ಬಸವಣ್ಣ, ಅಲ್ಲಮ, ಅಕ್ಕಮಹಾದೇವಿಯ ಪ್ರಭಾವವನ್ನು ಕಾಣಬಹುದು. ಇವನ ವಚನಗಳ ಪ್ರತಿಮೆಗಳು ಬಹುಮಟ್ಟಿಗೆ ಹಳೆಯವೆ, ಹಿಂದಿನ ವಚನ ಕ್ರಾಂತಿವೀರರು ರಾಜಾಶ್ರಯವನ್ನು ನಿರಾಕರಿಸಿದಂತೆ ಇವನೂ ನಿರಾಕರಿಸುತ್ತಾನೆ. ಇವನಲ್ಲಿ ಸಾಮಾಜಿಕ ಪ್ರತಿಭಟನೆ ಕಡಿಮೆ. ಭಕ್ತ, ಭವಿ ಎಂಬ ಸ್ಪಷ್ಟತೆ ಇವನಲ್ಲಿ ಕಾಣಿಸುತ್ತದೆ. ವೀರಶೈವ ಧರ್ಮದ ಕ್ರಾಂತಿಗುಣವು ತಣ್ಣಗಾಗುತ್ತ ಅದು ವ್ಯವಸ್ಥಿತ ಮತವಾಗಿ ಸ್ಥಾವರವಾಗುತ್ತಿದ್ದ ಆರಂಭ ಕಾಲವನ್ನು ಇವನ ವಚನಗಳು ಸೂಚಿಸುತ್ತವೆ. ಶುದ್ಧ, ಮಿಶ್ರ, ಸಂಕೀರ್ಣ, ಪೂರ್ವ, ಮಾರ್ಗ ಎಂಬ ಶೈವಗಳಲ್ಲಿ ಕರ್ಮ ಭಕ್ತಿಯೇ ಹೊರತು ಸದ್ಭಕ್ತಿ ಇಲ್ಲವೆಂದು ಈತ ಹೇಳುತ್ತಾನೆ. ಶುದ್ಧಶೈವರು ಲಿಂಗವನ್ನು ಒಮ್ಮೆ ಧರಿಸಿ ಇನ್ನೊಮ್ಮೆ ತೆಗೆದಿಟ್ಟು ಒಮ್ಮೆ ಭಕ್ತನಾಗಿ ಇನ್ನೊಮ್ಮೆ ಭವಿಯಾಗುತ್ತಾರೆ ಎನ್ನುತ್ತಾನೆ. ಆದಯ್ಯನಾದ ಮೇಲೆ ಮತ್ತೆ ವಚನ ಸೃಷ್ಟಿಯನ್ನು ನೋಡಬೇಕಾದರೆ ಹದಿನೈದು ಹದಿನಾರನೇ ಶತಮಾನಗಳಿಗೆ ಬರಬೇಕು.

ವಚನಕಾರರ ಸಾಮಾಜಿಕ ಆಂದೋಲನವು ಮತವಾಗಿ ಮುಂದುವರಿಯಿತೆಂದು ಹೇಳಲು ಅನೇಕ ಆಧಾರಗಳು ದೊರೆಯುತ್ತವೆ. ಬಸವ, ಮಾಚಿದೇವರಂತಹ ಪ್ರತಿಭಟನೆಯ ವ್ಯಕ್ತಿಗಳು ಮತ್ತು ತಮ್ಮನ್ನು ಭಾಷೆಯಲ್ಲಿ ಅಭಿವ್ಯಕ್ತಪಡಿಸಿಕೊಂಡ ಸಾಮಾನ್ಯ ಜನರು ಕಾಣಿಸಿಕೊಳ್ಳದಿರುವುದೇ ಅದಕ್ಕೆ ಮುಖ್ಯ ಆಧಾರವಾಗಿದೆ. ಏಕಾಂತದ ರಾಮಯ್ಯ,ಆದಯ್ಯ, ಗೊಗ್ಗಿದೇವ, ಕೆರೆಯಪದ್ಮರಸ ಮುಂತಾದವರು ಧರ್ಮದ ಉಳಿವಿಗಾಗಿ ಮತ್ತು ಪ್ರಚಾರಕ್ಕಾಗಿ ಶ್ರಮಿಸಿದರು.

ತೀವ್ರ ತುಡಿತವಿದ್ದ ವಚನಕಾರರ ಕಾಲ ಮುಗಿದು ಹೋಗಿದ್ದ ೧೨೨೦–೧೨೩೦ರಲ್ಲಿದ್ದ ಹರಿಹರ, ರಾಘವಾಂಕ ಇತರರು ವಚನಗಳನ್ನು ಬರೆಯದೆ ಕಾವ್ಯಗಳನ್ನು ರಚಿಸಿದರು. ಒಂದು ಬಗೆಯಲ್ಲಿ ಸಾಂಕ್ರಾಮಿಕವೆಂಬತೆ ಹಬ್ಬಿದ್ದ ವಚನ ಸೃಷ್ಟಿ ಈ ಕಾಲದಲ್ಲಿ ತನ್ನ ಉಬ್ಬರವನ್ನು ಕಳೆದುಕೊಂಡಿತ್ತು. ಜನರನ್ನು ಮತಾಂತರಗೊಳಿಸುವ ಕಾರ್ಯ ಭರದಿಂದ ಸಾಗಿದರೂ ಅದು ಪ್ರತಿಭಟನಾತ್ಮಕವಾದ ಸಮಾಜ ದರ್ಶನದ ಅಂಶವನ್ನು ಕಳೆದುಕೊಂಡಿತ್ತು. ಮೊದಲು ವಚನ ಯಾವ ಪರಿಸರದಲ್ಲಿ ಮೂಡಿತ್ತೋ ಆ ಪರಿಸರದಲ್ಲಿ ಮಾರ್ಪಾಡುಗಳಾಗಿದ್ದವು. ಬಸವಣ್ಣನ ಕಾಲದಲ್ಲಿ ಅದರಲ್ಲೂ ಸಾಮಾನ್ಯವರ್ಗದ ಕೃತಿಕಾರರು ಅನುಕರಣ ಪ್ರಿಯರಾಗಿದ್ದು ಆದಯ್ಯ ಉರಿಲಿಂಗ ಪೆದ್ದಿಗಳಂತವರಿಂದ ಆ ಪ್ರಕಾರಕ್ಕೆ ಪಾಂಡಿತ್ಯದ ಪ್ರವೇಶವಾಗಿತ್ತು.

ದಾಸಿಮಯ್ಯ, ಅಲ್ಲಮ, ಬಸವ, ಅಕ್ಕ, ಸಿದ್ದರಾಮ, ಚೌಡಯ್ಯ, ಗಜೇಶ ಮಸಣ್ಣಯ್ಯರಲ್ಲಿ ವಚನ ಪ್ರಕಾರ ಅರಳಿತ್ತು. ಮುಂದಿನ ಶರಣರು ಹೇಗೆ ಬರೆದರೂ ಅದೇ ಭಾವ, ಧಾಟಿ, ಸಿದ್ಧೋಕ್ತಿಗಳು ನುಗ್ಗಿ ಬಂದು ಮುಂದಿನ ಕೃತಿಕಾರರನ್ನು ಅನುಕರಣಕಾರನನ್ನಾಗಿ ಮಾಡುವ ಸಾಧ್ಯತೆಗಳೇ ಹೆಚ್ಚಿತ್ತು. ಇಂತಹ ಪರಿಸ್ಥಿತಿಯಲ್ಲಿ ಪ್ರತಿಭಾಶಾಲಿಗಳಾದ ಹರಿಹರ, ರಾಘವಾಂಕರು ಕಥನ ಕಾವ್ಯವನ್ನು ಮಾಧ್ಯಮವಾಗಿ ಆರಿಸಿಕೊಂಡದ್ದು ಅವರ ವಿವೇಕವನ್ನು ಸ್ವತಂತ್ರ ನಿರ್ಮಾಣ ಶಕ್ತಿಯನ್ನು ತೋರುತ್ತದೆ. ವಚನ ಸಾಹಿತ್ಯದಿಂದ ಪ್ರಭಾವಿತರಾದ ಈ ಕವಿಗಳ ಭಾಷೆ ಮತ್ತು ಧೋರಣೆಗಳು ಹಿಂದಿನ ಚಂಪೂ ಸಂಪ್ರದಾಯದ ಕವಿಗಳಿಗಿಂತ ಭಿನ್ನವಾಗಿದೆ.

ಹರಿಹರ ಹಿಂದಿನವರಂತೆಯೇ ಚಂಪೂ ಕಾವ್ಯ 'ಗಿರಿಜಾಕಲ್ಯಾಣ'ವನ್ನು ಬರದಿದ್ದರೂ ಇಲ್ಲಿಯ ಗಿರಿಜೆ ಅಕ್ಕಮಹಾದೇವಿಯಂತಹ ಸಾಧಕಿಯಾದ ಛಲದ ಮಾನಿನಿಯಾಗಿ ಕಾಣುತ್ತಾಳೆ. ಈ ಕಾವ್ಯವನ್ನು ಬಿಟ್ಟರೆ ಈ ಕವಿಗಳು ಬರೆದಿದ್ದು ಕಥನ ಕಾವ್ಯಗಳು, ರಗಳೆಗಳು, ಷಟ್ಪದಿಗಳು ಇವರ ಭಾಷೆ ಸಮಕಾಲೀನವಾದ ನಡುಗನ್ನಡ, ವಸ್ತು ಶಿವಭಕ್ತರ ಕತೆಗಳು. ಮನುಜರ ಮೇಲೆ ಸಾವವರ ಮೇಲೆ ಕಾವ್ಯ ಬರೆಯಬಾರದೆಂಬ ಪ್ರತಿಜ್ಞೆಯನ್ನು ಹರಿಹರ ಮಾಡಿದ. ಅವನಿಗೆ ಶಿವಭಕ್ತರು 'ಮನುಷ್ಯ'ರಲ್ಲ ಮತ್ತು ಅವರಿಗೆ ಸಾವಿಲ್ಲ ಅಲ್ಲಿಯವರೆಗೆ ಕನ್ನಡ ಕವಿಗಳು ಪೌರಾಣಿಕವಾದ ಕತೆಗಳನ್ನೇ ಆರಿಸಿಕೊಳ್ಳುತ್ತಿದ್ದರು. ಹಾಗೆಯೇ ಸಮಕಾಲೀನ ಜೀವನ, ಇತಿಹಾಸಗಳು ಈ ಕತೆಯಲ್ಲಿ ನುಸುಳುತ್ತಿದ್ದವು. ಆದರೆ ತಮ್ಮಂತೆಯೇ ನಿನ್ನೆ ಮೊನ್ನೆ ಇದೇ ಮಣ್ಣಿನ ಮೇಲೆ ಬದುಕಿದವರ ಕತೆಗಳನ್ನು ಹರಿಹರ ಆರಿಸಿಕೊಳ್ಳಲು ಅಥವಾ ಆ ಕತೆಗಳತ್ತ ಅವರ ಗಮನ ಹೋಗಲು ವಚನಕಾರರೇ ಕಾರಣರೆಂಬುದರಲ್ಲಿ ಅನುಮಾನವಿಲ್ಲ. ಹಿಂದೆ ನೋಡಿದಂತೆ ಕನ್ನಡ ಕಾವ್ಯಕ್ಷೇತ್ರಕ್ಕೆ ವ್ಯಕ್ತಿಯ ಅಂತರಂಗ ಮತ್ತು ಅವನ ಸುತ್ತಣ ಸಮಾಜ ಪ್ರವೇಶವಾದದ್ದೇ ವಚನಕಾರರಿಂದ ಇಲ್ಲಿಯ ಬದುಕಿನ ಬಗ್ಗೆ ಶ್ರದ್ಧೆಯನ್ನು ವಚನಕಾರರು ಮೂಡಿಸಿದ್ದರು. ಹರಿಹರ ಅಂತಹ ಶರಣರನ್ನು ಐತಿಹಾಸಿಕ ವ್ಯಕ್ತಿಗಳನ್ನು ವಸ್ತುವಾಗಿ ಆರಿಸಿಕೊಂಡದ್ದು ಕನ್ನಡ ಕಾವ್ಯಕ್ಷೇತ್ರದಲ್ಲಿ ಪ್ರಥಮ, ಹರಿಹರನ ಸೋದರಳಿಯನಾದ ರಾಘವಾಂಕನು ಸಿದ್ಧರಾಮ, ಆದಯ್ಯರ ಕತೆಗಳನ್ನು ವಸ್ತುವಾಗಿ ಆರಿಸಿಕೊಂಡ ಈ ಕಾವ್ಯ ನಾಯಕರೆಲ್ಲ ಕೆಲವು ಕಾಲದ ಹಿಂದೆ ಇದ್ದವರು. ರಾಘವಾಂಕ ಇನ್ನೂ ಒಂದು ಹೆಜ್ಜೆ ಮುಂದುಹೋಗಿ ತನ್ನ ಗುರು ಸೋದರ ಮಾವ ಹರಿಹರನನ್ನೇ ಕಾವ್ಯವಸ್ತುವಾಗಿ ಮಾಡಿಕೊಂಡವನು.

ವಸ್ತು ಮಾತ್ರವೇ ಅಲ್ಲ ಧೋರಣೆಯಲ್ಲೂ ವಚನಕಾರರ ಪ್ರಭಾವ ಕಾಣುತ್ತದೆ. ಬಸವ, ಅಲ್ಲಮ, ಸಿದ್ಧರಾಮರೆಲ್ಲರೂ ಭಕ್ತರೂ ಅವರು ಸಂಪ್ರದಾಯವನ್ನು ಧಿಕ್ಕರಿಸಿ ನಿಂತವರು. ಅವರ ಭಕ್ತಿ ಸಾಧನತೆಯೇ ಮುಖ್ಯವಾದರೂ ಅವರ ಪ್ರತಿಭಟನೆಯ ಚಿತ್ರವನ್ನು ಹರಿಹರ ರಾಘವಾಂಕರು ಎಲ್ಲವನ್ನು ಈ ಕವಿಗಳು ತಮ್ಮದೇ ರೀತಿಯಲ್ಲಿ ಪ್ರಶ್ನಿಸಿದ್ದಾರೆ. ವೇದ, ಶಾಸ್ತ್ರ, ಆಗಮ, ಪುರಾಣ ಇತ್ಯಾದಿಗಳೆಲ್ಲವೂ ಗಾಳಿಗೆ ತೂರಿ ಹೋದುವೆಂದು ಹರಿಹರ ಘೋಷಿಸುತ್ತಾನೆ. ಹರಿಹರ, ರಾಘವಾಂಕರಲ್ಲಿ ಇಲ್ಲಿಯ ಬದುಕಿನ ಬಗ್ಗೆ ಶ್ರದ್ಧೆ ಇದೆ. ಆಸಕ್ತಿ ಇದೆ. ಅವರ ಪಾತ್ರಗಳು ನಮ್ಮಂತೆಯೇ ಉಸಿರಾಡುತ್ತವೆ. ರಾಜರು ಕಾವ್ಯಗಳಲ್ಲಿ ಕಾಣಿಸಿಕೊಂಡರೂ ಆ ಸ್ಥಾನದ ಕಣ್ಣು ಕುಕ್ಕುವ ವರ್ಣನೆಗಳು ಅಲ್ಲಿಲ್ಲ. ರೈತ, ಬೇಟೆಗಾರ, ದನಗಾಹಿ ಹೊಲೆಯ, ಕಂಬಾರ, ಅಗಸ ಇಂಥವರೂ ಕಾವ್ಯ ನಾಯಕರಾದರು. ಈ ಧೋರಣೆಗೆ ಕಾರಣ ವಚನಕಾರರೇ ಈ ಕಾಲಘಟ್ಟದ ಕವಿಗಳ ಭಾಷೆಯ ಮೇಲೂ ವಚನಕಾರರ ಪ್ರಭಾವವಿದೆ. ಮಾರ್ಗಕಾವ್ಯ ಸಂಪ್ರದಾಯದ ಜೀವನದ ಅನುಭವಗಳನ್ನು ಅವರು ತಂದಿರುವ ರೀತಿಯಲ್ಲಿ ಎಲ್ಲೆಲ್ಲೂ ದೇಸಿ ಎದ್ದು ಕಾಣುತ್ತದೆ. ಜೊತೆಗೆ ಎಷ್ಟೋ ಕಡೆ ಹರಿಹರ ಬೇರೆ ಭಕ್ತರನ್ನು ವರ್ಣಿಸುವ ತನ್ನ ಅನುಭವಗಳನ್ನೇ ಹೇಳಿಕೊಳ್ಳುತ್ತಿದ್ದಾನೆನ್ನಿಸುತ್ತದೆ. ಇವನ 'ಪುಷ್ಪ ರಗಳೆ' ವಚನದಂತೆ ಭಾವಗೀತಾತ್ಮಕವಾಗಿದೆ.

ರಗಳೆಯ ಮಟ್ಟಾಗಲಿ, ಷಟ್ಪದಿಯಾಗಲಿ ಇವರ ಉದ್ದೇಶಕ್ಕೆ ಬಹು ಒಳ್ಳೆಯ ಮಾಧ್ಯಮವಾಗಿದೆ.

ಹರಿಹರ, ರಾಘವಾಂಕರ ಸಮಕಾಲೀನನಾದ ಕೆರೆಯ ಪದ್ಮರಸ ಸಕಲೇಶ ಮಾದರಸನ ಮೊಮ್ಮಗನಾಗಿದ್ದು, ಹುಟ್ಟಿನಿಂದ ವಚನಕಾರನೊಬ್ಬನ ವಂಶದವನಾಗಿದ್ದು, ರಗಳೆಯಲ್ಲಿ ಕೃತಿ ರಚನೆ ಮಾಡುತ್ತಾನೆ. ಇವನ 'ದೀಕ್ಷಾಬೋಧೆ' ವಚನಕಾರರ ಕಾಲದ ನಂತರ ವೀರಶೈವ ಧರ್ಮದ ಸ್ವರೂಪವನ್ನರಿಯಲು ಇದು ಒಂದು ಅಮೂಲ್ಯ ಆಕರ ಗ್ರಂಥವಾಗಿದೆ. ಪದ್ಮರಸನ ಭಾಷೆಯ ಮೇಲೂ ಆಲೋಚನೆಯ ಮೇಲು ವಚನಕಾರರ ಪ್ರಭಾವವಿದೆ. ಇವನ ಪ್ರಕಾರ ಒಬ್ಬ ತಂದೆ, ತಾಯಿಯ ಮಕ್ಕಳೆಲ್ಲ ಒಂದೇ ಜಾತಿಯವರು. ಆದ್ದರಿಂದ ಶಿವನ ಮಕ್ಕಳೆಲ್ಲ ಒಂದೇ ಜಾತಿಗೆ ಸೇರಿದವರು.

ಪದ್ಮರಸನ ಮಗ ಕುಮಾರ ಪದ್ಮರಸ. ತಂದೆಯ ಸಂಸ್ಕೃತ, 'ಸಾನಂದ ಚರಿತ' ಕಾವ್ಯವನ್ನು ಕನ್ನಡಕ್ಕೆ ಅನುವಾದಿಸಿದ್ದಾನೆ. ಇದರಲ್ಲಿ ಕುಸುಮ ಷಟ್ಪದಿಗಳೇ ವಿಶೇಷವಾಗಿವೆ. ಮಧ್ಯೆ ಎರಡು ರಗಳೆಗಳಿವೆ ತನ್ನ ಕೃತಿಯನ್ನು 'ಸ್ತ್ರೀ' ಬಾಲರಿಗೂ

ಅನೂಕೂಲವಾಗಲೆಂದು ಬರೆದಿರುವುದಾಗಿ ಹೇಳಿಕೊಂಡಿದ್ದಾನೆ. ಈ ಕೃತಿಯ ಬಗ್ಗೆ ಪದ್ಮಣಾಂಕ ತನ್ನ ಪದ್ಮರಾಜ ಪುರಾಣದಲ್ಲಿ ಬರೆಯುತ್ತ ಇದು ವೇದ, ಸ್ಮೃತಿ, ಆಗಮ, ಪುರಾಣಗಳು, ಉಪನಿಷತ್ತುಗಳ ಸಾರವೆಂದೂ ಕನ್ನಡದಲ್ಲಿ ಎಲ್ಲರಿಗೂ ಉಪಯೋಗವಾಗಲೆಂದು ರಚಿತವಾಯಿತೆಂದೂ ಹೇಳುತ್ತಾನೆ. ಭೀಮಕವಿಯೂ ತನ್ನ ಬಸವ ಪುರಾಣದಲ್ಲಿ ಬಸವನ ಅನೇಕ ವಚನಗಳನ್ನು ಬಳಸಿಕೊಂಡಿದ್ದಾನೆ. ಭೀಮ ಕವಿಯ ಮೂಲ ಪಾಲ್ಕುರಿಕೆ ಸೋಮನಾಥನ ತೆಲಗು ಬಸವ ಪುರಾಣವಾಗಿದೆ.

ಒಟ್ಟಿನಲ್ಲಿ ಈ ಕಾಲಘಟ್ಟದ ಕವಿಗಳು ವಚನಗಳನ್ನು ತಮ್ಮ ಕೃತಿಗಳಲ್ಲಿ ಅತ್ಯಲ್ಪ ವ್ಯತ್ಯಾಸಗಳೊಂದಿಗೆ, ಹೆಚ್ಚಿನ ವ್ಯತ್ಯಾಸಗಳೊಂದಿಗೆ ಭಾವಾನುವಾದ ಮಾಡಿ, ತಮ್ಮ ಗದ್ಯಪದ್ಯಗಳಲ್ಲಿ ತಂದು ತಮ್ಮ ಕೃತಿಗಳಿಗೆ ನೈಜತ್ವದ ಛಾಯೆಯನ್ನು ಕೊಡಲು ಪ್ರಯತ್ನಿಸಿದ್ದಾರೆ. ವಚನಕಾರರು ಬೇರೆ ಬೇರೆ ಸಂದರ್ಭಗಳಲ್ಲಿ ಮನಸ್ಸು ಆವೇಶಗೊಂಡಾಗ, ಆನಂದ ಉಕ್ಕಿ ಹರಿದಾಗ ಧರ್ಮಸಂಕಟಕ್ಕೆ ಸಿಕ್ಕಾಗ ಕೋಪ ತಾಪ, ಹಿಗ್ಗು, ಛಲ ಮುಂತಾದ ಭಾವಾಂತರಗಳಿಗೆ ಸಿಕ್ಕಾಗ ಭಗವಂತನೊಡನೆ ಪ್ರೇಮ, ಹುರುಡು, ಸಮರ್ಪಣೆ, ಸವಾಲು ಇತ್ಯಾದಿಯಾದ ಸಂಬಂಧಗಳನ್ನು ಹೊಂದಿದಾಗ ಅವರ ಬಾಯಿಯಿಂದ ವಚನಗಳು ಹೊರಟದ್ದನ್ನು ಇವರು ಕೊಡುತ್ತಾರೆ. ಆ ಐತಿಹಾಸಿಕ ವ್ಯಕ್ತಿಗಳನ್ನು ವಚನಕಾರರನ್ನಾಗಿಯೂ ಅರ್ಥಮಾಡಿಕೊಳ್ಳಲು ಮತ್ತು ಕಲ್ಪಿಸಿಕೊಳ್ಳಲು ಇದು ಅನುಕೂಲತೆಯನ್ನು ಮಾಡುತ್ತದೆ. ವಚನಗಳಿಗೆ ಹಿನ್ನೆಲೆಯ ಚೌಕಟ್ಟನ್ನು ನಿರ್ಮಿಸಲು ವಚನಗಳನ್ನು ಅರ್ಥಮಾಡಿಕೊಳ್ಳಲು ಇವರ ಕಾವ್ಯಗಳು ಸಹಾಯಕವಾಗುತ್ತವೆ.

ವಚನಗಳನ್ನು ಅವು ಇರುವಂತೆಯೇ ತಮ್ಮ ಕಾವ್ಯಗಳಲ್ಲಿ ಉದ್ಧರಿಸುವ ಸಂಪ್ರದಾಯವನ್ನು ಸಿಂಗಿರಾಜ ಮತ್ತು ಚಾಮರಸರು ಅನುಸರಿಸಿದ್ದಾರೆ. ಜೊತೆಗೆ ಹರಿಹರ, ರಾಘವಾಂಕರಂತೆ ತಮ್ಮ ನಿರೂಪಣೆಯಲ್ಲಿ ಅವನ್ನು ಬಳಸಿಕೊಳ್ಳುತ್ತಾರೆ. ಮುಖ್ಯವಾಗಿ ಹದಿಮೂರು ಹದಿನಾಲ್ಕನೆಯ ಶತಮಾನಗಳಲ್ಲಿ ವಚನ ಸೃಷ್ಟಿಯಾಗದಿದ್ದರೂ ಅವುಗಳ ಬಗ್ಗೆ ಜನತೆಯ ಆಸಕ್ತಿ ಜೀವಿತವಾಗಿದ್ದತ್ತು. ವೀರಶೈವ ಕವಿಗಳಿಗಂತೂ ಅವು ಸ್ಫೂರ್ತಿಯ ಚಿಲುಮೆಯಾಗಿದ್ದುವು. ಒಟ್ಟು ದೃಷ್ಟಿಯಿಂದ ಹೇಳುವುದಾದರೆ ಉಸಿರಾಡುತ್ತಿದ್ದರು. ಕತೆಗಳಲ್ಲಿ ಶರಣರು ಬದುಕಿದ್ದರು. ವಚನಗಳಲ್ಲಿ ಅವರ ಮಾತು ಕೇಳಿಸುತ್ತಿತ್ತು.

# ಅಧ್ಯಾಯ – ೪

## ಬಸವಣ್ಣನ ಆಯ್ದ ವಚನಗಳಲ್ಲಿ ಸಾಮಾಜಿಕ ಪ್ರಜ್ಞೆ

ಕಲ್ಯಾಣದ ಶಿವಶರಣರದು ಕನ್ನಡ ನೆಲದ ಮೇಲೆ ನಡೆದ ಪ್ರಥಮ ಸಮಾಜೋಧಾರ್ಮಿಕ ಆಂದೋಲನವಾಗಿದೆ. ಹನ್ನೆರಡನೆಯ ಶತಮಾನದಲ್ಲಿ ಜರುಗಿದ ಈ ಆಂದೋಲನದ ನಾಯಕ ವ್ಯಕ್ತಿ ಬಸವಣ್ಣ.

ಧರ್ಮ ನಮ್ಮ ಜೀವನ ಸರ್ವಸ್ವವನ್ನು ನಿಯಂತ್ರಿಸುವ ಪ್ರಬಲ ಶಕ್ತಿಯಾಗಿ ಬಹಳ ಹಿಂದೆಯೇ ಪರಿಣಮಿಸಿತು. ಅದೇ ನಮ್ಮ ಶಕ್ತಿಯೂ ಆಯಿತು. ದೌರ್ಬಲ್ಯವು ಆಯಿತು. ಕಾಲಕ್ರಮದಲ್ಲಿ ಧರ್ಮ ಎಲ್ಲರನ್ನೂ ಒಟ್ಟುಗೂಡಿಸುವ ವೈಚಾರಿಕ ಶಕ್ತಿಯಾಗುವುದಕ್ಕೆ ಬದಲಾಗಿ ಸಮಾಜವನ್ನು ಹರಿದು ಹಂಚುವ ಜಡ ವ್ಯವಸ್ಥೆಯಾಗಿ ಪರಿಣಮಿಸಿತು. ಸಾಮಾಜಿಕ ಮೇಲು–ಕೀಳುಗಳೂ ಆರ್ಥಿಕ ಏರು–ಪೇರುಗಳೂ ಧಾರ್ಮಿಕ ಅಂಗೀಕಾರವನ್ನು ಪಡೆದವು. ಧರ್ಮಶಾಸ್ತ್ರಗಳು ಆಯಾವರ್ಣಗಳ ಕರ್ತವ್ಯವನ್ನು ಖಚಿತಗೊಳಿಸಿದವು. ಮೇಲುವರ್ಣಗಳಲ್ಲಿ ಅವು ಸ್ವಲ್ಪ ಹೆಚ್ಚು ಕಡಿಮೆ ಆದರೂ ಕೆಳವರ್ಣಗಳವರಂತೂ ಅದನ್ನು ಮೀರಿ ನಡೆಯುವ ಹಾಗಿರಲಿಲ್ಲ.

ಹೀಗೆ ನಮ್ಮ ಧರ್ಮ ಒಂದು ಕಡೆಯಲ್ಲಿ ಚತುರ್ವರ್ಣಗಳನ್ನು ಮೇಲು–ಕೀಳುಗಳನ್ನು ಸೃಷ್ಟಿಸಿ ಪುರೋಹಿತಶಾಹಿಯ ಹಿಡಿತದಲ್ಲಿದ್ದರೆ, ರಾಜಸತ್ತೆ, ಮತಸತ್ತೆಗಳು, ಸಮಾಜವನ್ನು ನಿಯಂತ್ರಿಸುವ ಶಕ್ತಿಯಾಗಿದ್ದವು. ರಾಜಸತ್ತೆಯ ಪೋಷಣೆಗಾಗಿ ಯುದ್ಧದಲ್ಲಿ ತೊಡಗುವುದು ಸುಂಕತರುವುದಕ್ಕೆ ದುಡಿಯುವುದು ಅಂದಿನ ಪ್ರಜೆಗಳ ಸ್ಥಿತಿಯಾಗಿದ್ದಿತು. ಈ ರಾಜಸತ್ತೆಗೆ ಪೂರಕವೆನಿಸುವ ಮತಸತ್ತೆಯಲ್ಲಿ ಪ್ರತಿಷ್ಠಿತ ಧರ್ಮಗಳ ಆಡಂಬರಗಳೂ, ಜನಪದ ಧರ್ಮಗಳ ಕ್ರೂರ ಆಚರಣೆಗಳೂ ಉಲ್ಬಣಗೊಂಡಿದ್ದವು. ಒಟ್ಟು ಜನವರ್ಗದಲ್ಲಿಯೇ ಪುರುಷವರ್ಗವು ಸ್ತ್ರೀವರ್ಗವನ್ನು ತುಳಿಯುತ್ತಲಿದ್ದಿತು. ಹೀಗಾಗಿ ಸಮಾಜದಲ್ಲಿ ರಾಜವರ್ಗ– ಪ್ರಜಾವರ್ಗ, ಪುರೋಹಿತ ವರ್ಗ – ಭಕ್ತವರ್ಗ, ಪುರುಷವರ್ಗ – ಸ್ತ್ರೀವರ್ಗಗಳೆಂಬ ಸೀಳು ತಲೆದೋರಿ ಒಂದು ಇನ್ನೊಂದನ್ನು ಶೋಷಿಸುವಲ್ಲಿ ಜೀವನ ವ್ಯವಸ್ಥೆಯು ಸಾಮಾಜಿಕ ಸಮತೋಲನೆಗಾಗಿ ಹೋರಾಡಿದವರು ಬಸವಣ್ಣ.

ಬಸವಣ್ಣನವರು ಮಾನವತೆಯ ಬಳ್ಳಿಗೆ ಅರಳಿದ ಮಂದಾರಪುಷ್ಪ ದೇವಲೋಕದ ನಂದನವನದ ಕಲ್ಪವೃಕ್ಷ. ಅವರು ಬದುಕಿನ ನವೀನ ಮೌಲ್ಯಗಳನ್ನು ಪ್ರತಿಷ್ಠಾಪನೆ ಮಾಡಿದ ಪುಣ್ಯಪುರುಷರು. ಅಪೂರ್ವ ಕ್ರಾಂತಿಯನ್ನೆಸಗಿದ

ಕ್ರಾಂತದರ್ಶಿಗಳು ಎಂದೂ ಆರದ ನಂದಾದೀಪವಾಗಿ ಬೆಳಗಿದ ದಿವ್ಯ ಜ್ಯೋತಿ ಸ್ವರೂಪರು. ಮನುಕುಲದ ಉದ್ಧಾರಕ್ಕಾಗಿ ಮೈವೆತ್ತು ಬಂದ ಮಹಾಮಹಿಮರು. ದಯವೆಂಬ ಧರ್ಮಧ್ವಜವನ್ನು ಎತ್ತಿ ಹಿಡಿದು ಉಚ್ಚ-ನೀಚ, ಬಡವ-ಬಲ್ಲಿದ, ಜಾತಿ-ಮತ, ವರ್ಣ-ಆಶ್ರಮ ಈ ತರತಮ ಸಾಮ್ರಾಜ್ಯದ ಮೇಲೆ ಚೈತ್ರಯಾತ್ರೆನ್ನಸಗಿದ ವೀರಪುರುಷರು.

ಇಡೀ ವ್ಯವಸ್ಥೆಯನ್ನೇ ಪ್ರಶ್ನಿಸಿ ಅದರ ವಿರುದ್ಧ ಸಿಡಿದು ನಿಲ್ಲುವ ಮೊತ್ತ ಮೊದಲನೆಯ ಪ್ರಯತ್ನ ನಡದದ್ದೇ ಬಸವಣ್ಣನವರಿಂದ, ವಚನಚಳವಳಿಯ ಮೂಲಕ ಅನ್ಯಾಯವೆಂದು ಕಂಡದ್ದನ್ನು ಪ್ರತಿಭಟಿಸಿ ನಿಲ್ಲುವ ಕ್ರಾಂತಿ ಮನೋಭಾವ ಧರ್ಮ ಬಸವಣ್ಣನವರದು. ಚಿಕ್ಕಂದಿನಲ್ಲಿಯೇ ಉಪನಯನವನ್ನು ವಿರೋಧಿಸಿದ ಹುಟ್ಟು ಕ್ರಾಂತಿಕಾರಿಯಾಗಿ, ಬಾಲ್ಯದಿಂದಲೇ ಪ್ರಾರಂಭವಾದ ಪ್ರತಿಭಟನೆ ಜೀವನದುದ್ದಕ್ಕೂ ಸಾಗಿ ಅಂದಿನ ಸಾಮಾಜಿಕ ಮೌಲ್ಯಗಳನ್ನು ಪ್ರತಿಭಟಿಸುತ್ತಾ ಪ್ರವಾಹಕ್ಕೆ ವಿರುದ್ಧವಾಗಿ ಈಜಬೇಕಾಯಿತು. ಮೇಲು-ಕೀಳುಗಳು ಅಂದು ಒಪ್ಪಿಕೊಂಡ ಮೌಲ್ಯವಾಗಿದ್ದಿತು. ಎಲ್ಲರು ಸಮಾನರು ಎನ್ನುವುದು ತತ್ವದಲ್ಲಿ ಮಾತ್ರ ಉಳಿದು ಎಲ್ಲರಿಗೂ ಸಮಾನ ಅವಕಾಶಗಳು ಎಂಬುದು ಕಲ್ಪನೆಗೂ ಮೀರಿದ ಕನಸಿನ ಮಾತಾಗಿತ್ತು ಜೀವನದ ಉನ್ನತ ಸೌಲಭ್ಯಗಳು ಕೆಲವರಿಗೆ ಮಾತ್ರ ಸೀಮಿತವಾಗಿದ್ದವು. ಎಲ್ಲರಿಗೂ ವಿದ್ಯಾಭ್ಯಾಸ ಎನ್ನುವುದಂತೂ ಊಹೆಗೂ ಮೀರಿತು. ಶಿಕ್ಷಣ ಕೆಲವರಿಗೆ ಮಾತ್ರ ಸೀಮಿತವಾಗಿತ್ತು. ವೇದ, ಉಪನಿಷತ್ತು ಮೊದಲಾದ ಗ್ರಂಥಗಳು ಕೆಲವರ ಗುತ್ತಿಗೆಯಾಗಿದ್ದವು.

ಅಂದಿನ ಧಾರ್ಮಿಕ, ಸಾಮಾಜಿಕ ಪರಿಸರವನ್ನೂ ಜನಸಾಮಾನ್ಯರ ಅಜ್ಞಾನವನ್ನೂ ಕಂಡು ಬಸವಣ್ಣನವರು ಮರುಗಿದರು. ಧರ್ಮದ ಬಹುದೊಡ್ಡ ತತ್ವಗಳನ್ನು ಅದಕ್ಕೆ ವಿರುದ್ಧವಾಗಿ ಸಂಕುಚಿತ ನಡೆಯಲ್ಲಿ ತೊಡಗಿರುವ ಉತ್ತಮರನ್ನು ಕಂಡು ಕೆರಳಿ

ಏನಯ್ಯಾ, ವಿಪ್ರರು ನುಡಿದಂತೆ ನಡೆಯರು, ಇದೆಂತಯ್ಯಾ?
ತಮಗೊಂದು ಬಟ್ಟೆ ಶಾಸ್ತ್ರಕ್ಕೊಂದು ಬಟ್ಟೆ!
ಕೂಡಲ ಸಂಗಮ ದೇವಯ್ಯಾ. . . . .
ಎಂದು ಉದ್ಗಾರ ತೆಗೆಯುತ್ತಾರೆ.

ಬಸವಣ್ಣನವರ ವಚನಗಳು ಹಿಂದೂ ಧಾರ್ಮಿಕ, ಸಾಮಾಜಿಕ ವ್ಯವಸ್ಥೆಯು ರೂಪಿಸಿದ್ದ ಶುದ್ಧ-ಅಶುದ್ಧತೆಯ ಕಲ್ಪನೆಯನ್ನು ನಿರಾಕರಿಸುತ್ತವೆ. ಶಾಶ್ವತ ಅಶುದ್ಧತೆಯ

ಒತ್ತಾಯಗಳಿಂದ ಸಾಮಾಜಿಕವಾಗಿ ಚಲಿಸಲಾಗದ ವರ್ಗವಾಗಿದ್ದ ಹಿಂದುಳಿದವರ ಬಗ್ಗೆ ಹೊಸ ಕಾಳಜಿಗಳನ್ನು ಬಸವಣ್ಣನವರ ವಚನಗಳಲ್ಲಿ ಕಾಣಬಹುದು. ಹುಟ್ಟೇ ಕಾರಣವಾಗಿ ಜಾತಿ ಹಾಗೂ ಅಸ್ಪೃಶ್ಯತೆಯ ಮಿತಿಗಳಿಗೆ ಒಳಗಾಗುತ್ತಿದ್ದ ಸ್ಥಾವರ ಹಾಗೂ ಕಠೋರ ನಿಯಮಗಳನ್ನು ಇಲ್ಲಿ ತಿರುಗು-ಮುರುಗಾಗುತ್ತವೆ.[೧]

ಕೊಲುವವನೇ ಮಾದಿಗ ಹೊಲಸು ತಿಂಬುವವನೇ ಹೊಲೆಯ
ಕುಲವೇನೋ ಅಂದಿರ ಕುಲವೇನೋ?
ಸಕಲ ಜೀವಾತ್ಮರಿಗೆ ಲೇಸನೆ ಬಯಸುವ
ನಮ್ಮ ಕೂಡಲ ಸಂಗನ ಶರಣರೆ ಕುಲಜರು.

ನಡೆ-ನುಡಿಗಳ ಸಂಬಂಧದಲ್ಲಿ ಹೊಲೆತನವನ್ನು ಗುರುತಿಸುವ ಬಸವಣ್ಣನವರು ಅಶುದ್ಧತೆಯ ಹೊಸ ರೀತಿಯಲ್ಲಿ ವಿವರಿಸುತ್ತಾರೆ. ನುಡಿಗಿಂತ ಮೊದಲು ಸಾಧನೆಯನ್ನು ಬಸವಣ್ಣನವರು ಕಾರ್ಯಗತಗೊಳಿಸಿದರು.

ಜಾಗತಿಕ ಮಾನವನ ಹಕ್ಕು ಬಾಧ್ಯತೆಗಳ ಪ್ರಣಾಳಿಕೆಯ ಹಿನ್ನೆಲೆಯಲ್ಲಿ "ಸರ್ವರಿಗೂ ಸಮಬಾಳು, ಸರ್ವರಿಗೂ ಸಮಪಾಲು" ಎಂಬ ಮಾತು ತೀರಾ ಸಹಜವಾಗಿ ಕಾಣಬಹುದು. ಆದರೆ ಎಂಟುನೂರು ವರ್ಷಗಳ ಹಿಂದಿನ ಹಿಂದೂ ಸಮಾಜದಲ್ಲಿ ಇದು ಊಹಿಸಲಿಕ್ಕೂ ಆಗದ ಧರ್ಮದ್ರೋಹವಾಗಿ ಪರಿಗಣಿತವಾಗಿತ್ತು. ಅವರವರ ಕರ್ಮಕ್ಕನುಗುಣವಾಗಿ ಆಯಾ ವರ್ಣಜಾತಿಗಳಲ್ಲಿ ಜನ್ಮವೆತ್ತಿದ್ದ ಜನ ಅದಕ್ಕನುಗುಣವಾಗಿ ನಡೆದುಕೊಳ್ಳುವುದೇ ಸನಾತನ ಧರ್ಮವಾಗಿತ್ತು. ಅದರ ಪ್ರಕಾರ ಶೂದ್ರರು-ಅಸ್ಪೃಶ್ಯರಿಗೆ ವಿದ್ಯಾಭ್ಯಾಸವಿರಲಿಲ್ಲ. ಅವರವರು ಕೈಗೊಂಡ ಉದ್ಯೋಗಗಳೇ ಜಾತಿಗಳಾಗಿ ಪರಿಣಮಿಸುತ್ತಿದ್ದವು.

ಇದನ್ನು ತೀವ್ರವಾಗಿ ಪ್ರತಿಭಟಿಸಿ ಅದಕ್ಕೆ ಮೊದಲ ಬಾರಿಗೆ ಪ್ರಬಲವಾದವನ್ನು ಕೊಟ್ಟಿದ್ದು ಬಸವಣ್ಣ ಇವರ ಯಾವುದೇ ವಿಚಾರವನ್ನು ಕುರಿತ ಪ್ರತಿಭಟನೆ-ತಿರಸ್ಕಾರಗಳಿಗೆ ಮೂಲಕಾರಣ ಅದರಲ್ಲಿ ಇರುವ ಮಾನವ ಕೃತ ವರ್ಣಶ್ರೇಣಿಯ ಕುಲ-ಜಾತಿ, ವರ್ಣ-ಲಿಂಗಭೇದಾದಿ ತಾರತಮ್ಯಗಳು.[೨] ಅದರಲ್ಲೂ ಮುಖ್ಯವಾಗಿ ಕಾರಣವಾಗಿದ್ದು ಜಾತಿವ್ಯವಸ್ಥೆ. ಬಸವಣ್ಣನವರ ಅಗಾಧ ಸಿಟ್ಟು, ಪ್ರತಿರೋಧ, ಅಸಹನೆಗಳು ಉಂಟಾಗಲು ಕಾರಣ ವರ್ಣ ವ್ಯವಸ್ಥೆಯ ಜಾತೀಯ ವಿಷಮತೆ-

---

೧. ವೀರಶೈವ ಧರ್ಮ ದರ್ಶನ, ಡಾ. ಯು.ಆರ್.ಅನಂತಮೂರ್ತಿ, ಪುಟ ೨೯೫.
೨. ಬಸವಣ್ಣನವರ ಕ್ರಾಂತಿಮಾರ್ಗ, ಡಾ. ಕೆ.ಎ.ಲತಾ, ಪುಟ ೭೧.

ಮೌಢ್ಯಗಳನ್ನು ವ್ಯವಸ್ಥಿತವಾಗಿ ಬಿತ್ತಿ ಯಥಾವತ್ತಾಗಿ ಕಾಪಾಡಿಕೊಳ್ಳುತ್ತಾ ಬಂದಿರುವುದು. ಆದ್ದರಿಂದಲೇ ಬಸವಣ್ಣ ಜನ್ಮಾಧಾರಿತ ಕುಲ–ಜಾತಿ ತಾರತಮ್ಯಗಳನ್ನು ಪ್ರಶ್ನಿಸುತ್ತಾ ವಿಚಾರಪೂರ್ವಕವಾಗಿ ವಿಶ್ಲೇಷಿಸಿದ್ದಾರೆ. ಎಲ್ಲಾ ಮಾನವರಲ್ಲೂ ಜೀವ ಸೃಷ್ಟಿಯಾಗುವ ಶಾಶ್ವತ ಪ್ರಾಕೃತಿಕ ವ್ಯವಹಾರಗಳು ಒಂದೇ ಬಗೆಯವು. ಹುಟ್ಟಿದ ಮಾನವರಲ್ಲಿ ಆಸೆ–ಆಮಿಷ, ರೋಷ–ಹರುಷದ ವಿಷಯಗಳು ಒಂದೇ. ಹೀಗಿರುವಲ್ಲಿ ಶ್ರೇಷ್ಠ ಕುಲಜ ಎಂಬುದಕ್ಕೆ ಆವುದುದೃಷ್ಟ? ಶ್ರೇಣೀಕೃತ ವರ್ಣ ವ್ಯವಸ್ಥೆಯಿಂದ ಪ್ರಯೋಜನವೇನು? ಜನರಲ್ಲಿರುವ ಸ್ಪಷ್ಟವಾದ ಭಿನ್ನತೆಗಳು ಹುಟ್ಟಿನಿಂದ ಬಂದವಲ್ಲ. ಜೀವನೋಪಾಯಕ್ಕಾಗಿ ಉಂಟಾದವು ಅವರವರ ಗುಣ–ಕರ್ಮಗಳ ಮೇಲೆ ಜಾತಿಗಳು ನಿರ್ಮಿತವಾದುದನ್ನು ಬಸವಣ್ಣನವರು ಮನಗಾಣಿಸುತ್ತಾರೆ.

ಕಾಸಿ ಕಮ್ಮಾರನಾದ ಬೀಸಿ ಮಡಿವಾಳನಾದ
ಹಾಸನಿಕ್ಕಿ ಸಾಲಿಗನಾದ, ವೇದವನೋದಿ ಹಾರುವನಾದ
ಕರ್ಣದಲ್ಲಿ ಜನಿಸಿದವರುಂಟೇ ಜಗದೊಳಗೇ?
ಇದು ಕಾರಣ ಕೂಡಲ ಸಂಗಮದೇವಾ
ಅಂಗಸ್ಥಲದನರಿದವನೆ ಕುಲಜ.

ಹೊಲೆಯೊಳಗೆ ಹುಟ್ಟಿ ಕುಲವರಸುವೆ
ಎಲವೋ ಮಾತಂಗಿಯ ಮಗ ನೀನು
ಸತ್ತುದನೆಳೆವ ನೆತ್ತಳ ಹೊಲೆಯ?
ಹೊತ್ತು ತಂದು ನೀವು ಕೊಲವಿರಿ
ಶಾಸ್ತ್ರವೆಂಬುದು ಹೋತಿಂಗೆ ಮಾರಿ
ವೇದವೆಂಬುದು ನಿಮಗೆ ತಿಳಿಯದು
ನಮ್ಮ ಕೂಡಲಸಂಗಮನ ಶರಣರು
ಕರ್ಮವಿರಹಿತರು ಶರಣ ಸನ್ನಿಹಿತರು ಅನುಪಮ ಚಾರಿತ್ರರು
ಅವರಿಗೆ ತೋರಲು ಪ್ರತಿಯಿಲ್ಲವೋ.

ಎಂದು ಹಿಂಸಾಮೂಲವಾದ ಯಜ್ಞ–ಯಾಗಾದಿಗಳಲ್ಲಿ ನಿರತವಾದ ಕುಲವನ್ನು ಅರಸುವ ವೇದ ಜಡರನ್ನು ಹೀಯಾಳಿಸುತ್ತಾರೆ. ಹುಟ್ಟು ಕುಲದಿಂದಲೇ ಉತ್ತಮರಾದೆವು ಎಂಬುವವರನ್ನು ಹಿಂದಿನ ಹಿರಿಯರ ಉದಾಹರಣೆಗಳನ್ನು ಕೊಟ್ಟು ಖಂಡಿಸುತ್ತಾನೆ.

ವ್ಯಾಸ ಬೋವಿತಿಯ ಮಗ, ಮಾರ್ಕಂಡೇಯ ಮಾತಂಗಿಯ ಮಗ
ಮಂಡೋದರಿ ಕಪ್ಪೆಯ ಮಗಳು
ಕುಲವನರಸದಿರಿಂ ಭೋ! ಕುಲದಿಂದ ಮುನ್ನೇನಾದಿ ರಿಂಭೋ!
ಸಾಕ್ಷಾತ್ ಅಗಸ್ತ್ಯ ಕಬ್ಬಿಲ, ದುರ್ವಾಸ ಮುಚ್ಚಿಗ, ಕಶ್ಯಪ ಕಮ್ಮಾರ
ಕೌಂಡಿನ್ಯನೆಂಬ ಋಷಿ ಮೂರು ಭುವನರಿಯೆ ನಾವಿದ ಕಾಣಿಭೋ
ನಮ್ಮ ಕೂಡಲಸಂಗನ ವಚನದಿಂತೆದುದು:
ಶ್ವಪಚೋಪಿಯಾದಡೇನು, ಶಿವಭಕ್ತನೆ ಕುಲಜಂಭೋ!

ಸಮಾಜದಲ್ಲಿ ವರ್ಣ ಜಾತಿ ವ್ಯವಸ್ಥೆ ವೈಯಕ್ತಿಕ ಸಾಧನೆಗೂ ಸಾಮಾಜಿಕ ಒಳಿತಿಗೂ ಅಡ್ಡಿಯಾಗಿ ವಿಷದಂತೆ ವ್ಯಾಪಿಸಿರುವುದನ್ನು ಕಂಡು

ಜಾತಿವಿಡಿದು ಸೂತಕವನರಸುವೆ:
ಜ್ಯೋತಿ ವಿಡಿದು ಕತ್ತಲೆಯ ನರಸುವೆ!
ಇದೇಕೋ ಮರಳು ಮಾನವಾ
ಜಾತಿಯಲ್ಲಿ ಅಧಿಕನೆಂಬೆ!
ವಿಪ್ರ ಶತಕೋಟಿಗಳಿದ್ದಲ್ಲಿ ಫಲವೇನೊ?
ಭಕ್ತನೆ ಶಿಖಾಮಣಿ ಎಂದುದು ವಚನ
ನಮ್ಮ ಕೂಡಲಸಂಗನ ಶರಣರ ಪಾದ ಪುರುಷನ ನಂಬು
ಕೆಡಬೇಡ ಮಾನವಾ.

ಎಂಬ ಮಾತಿನಲ್ಲಿ ಜಾತಿಗಳನ್ನೆಲ್ಲ ನಿರಾಕರಿಸಿ ಸದಾಚಾರ ಸನ್ಮಾರ್ಗಗಳ ಭಕ್ತಿ ಜೀವವನ್ನು ಎತ್ತಿ ಹಿಡಿಯುವ ಕಳಕಳಿಯಿದೆ. ಸನ್ಮಾರ್ಗದಲ್ಲಿದ್ದವರೇ ಒಂದು ಜಾತಿ ದುರ್ಮಾರ್ಗಿಗಳದ್ದೇ ಇನ್ನೊಂದು ಜಾತಿ ಬಸವಣ್ಣ ಮಾನವ ಮಾರ್ಗದಲ್ಲಿ ಮಾಡಿದ್ದು ಈ ಎರಡೇ ಜಾತಿಗಳನ್ನು ಇವುಗಳನ್ನು ಪಾರಿಭಾಷಿಕವಾಗಿ 'ಭಕ್ತ' 'ಭವಿ' ಎಂದು ಕರೆದರು. ಲಿಂಗ ಕಟ್ಟಿದ ಮಾತ್ರಕ್ಕೆ ಭಕ್ತನಲ್ಲ ಆಚರಣೆಯಿಂದ ದೊಡ್ಡವನಾಗುತ್ತಾನೆಯೇ ಹೊರತೂ ಹುಟ್ಟಿದ ಉತ್ತಮ ಕುಲದಿಂದಾಗಲಿ, ಹಣ ಅಧಿಕಾರಗಳಿಂದಾಗಲಿ ಅಲ್ಲ.[೧]

ಕುಲಮದ ಎಲ್ಲ ಅಹಂಕಾರಗಳಿಗಿಂತ ದೊಡ್ಡದು. ಅದರಲ್ಲೂ ಸಮಾಜದ ಸರ್ವಸೌಲಭ್ಯಗಳೂ ಕುಲದಿಂದಲೇ ನಿರ್ಣಯವಾಗುತ್ತಿದ್ದ ಅಂದಿನ ಸಮಾಜದಲ್ಲಿ ಅದರ ಉಪಟಳ ಅಪಾರ ಅದರ ನಿರ್ಮೂಲನೆಗಾಗಿಯೇ ಬಸವಣ್ಣನವರು ಅತಿ ಹೆಚ್ಚಿನ

೧. ವಚನ ಚಳವಳಿ, ಡಾ. ಎಚ್.ತಿಪ್ಪೇರುದ್ರಸ್ವಾಮಿ, ಪುಟ ೨೧.

ಮಹತ್ವ ಕೊಟ್ಟರು. ತಮ್ಮನ್ನು ಅದರಲ್ಲಿ ತೊಡಗಿಸಿಕೊಂಡು ಉಳಿದವರಿಗೆ ಮಾರ್ಗದರ್ಶಕ-ರಾದವರು ಉತ್ತಮಕುಲ, ಉನ್ನತ ಅಧಿಕಾರ, ಪ್ರಖರ ಪಾಂಡಿತ್ಯ ಬೆರಗುಗೊಳಿಸುವ ಬುದ್ಧಿವಂತಿಕೆ ರೂಪ ಎಲ್ಲವೂ ಇದ್ದ ಬಸವಣ್ಣನವರು ಇವುಗಳೊಂದಕ್ಕೂ ಅಧೀನರಾಗದೆ ಮೀರಿನಿಂತದ್ದು ಅವರ ಸಾಧನೆಯ ಒಂದು ಪವಾಡ ಹೆಜ್ಜೆ-ಹೆಜ್ಜೆಗೂ ತಮ್ಮ ಉತ್ತಮಿಕೆಯ ಅಹಂಕಾರವನ್ನು ನಿರಸನಗೊಳಿಸಿಕೊಳ್ಳುತ್ತಾ ಸಮಾಜದ ಸಾಮಾನ್ಯರೊಡನೆ ತಮ್ಮನ್ನು ಏಕೀಭವಿಸಿಕೊಳ್ಳುವ ಅವರ ನಿರಂತರ ಜಾಗೃತಿ ಇಡೀ ಜಗತ್ತಿನ ಸಾಧಕರಲ್ಲಿಯೇ ಅಪೂರ್ವವಾದದ್ದು.

ಉತ್ತಮ ಕುಲದಲ್ಲಿ ಹುಟ್ಟಿದೆನೆಂಬ
ಕಷ್ಟತನದ ಹೊರೆಯ ಹೊರಿಸದಿರಯ್ಯ
ಕಕ್ಕಯ್ಯ ನೊಕ್ಕುದನಿಕ್ಕ ನೋಡಯ್ಯ
ದಾಸಯ್ಯ ಶಿವನವನೆರೆಯೆ ನೋಡಯ್ಯಾ
ಮನ್ನಣೆಯ ಚೆನ್ನಯ್ಯನೆನ್ನುವ ಮನ್ನಿಸ
ಉತ್ತಮ ಮಹಿಮ
ಕೂಡಲಸಂಗಮದೇವಾ ಶಿವಧೋ ಶಿವಧೋ!

ಎಂದು ಉತ್ತಮ ಕುಲದ ಕಷ್ಟತನದ ಹೊರೆಯನ್ನು ಕಳೆದುಕೊಳ್ಳಬಯಸುತ್ತಾರೆ. ಆ ಪ್ರಯತ್ನದಲ್ಲಿ ಕಕ್ಕಯ್ಯ, ದಾಸಯ್ಯ, ಚೆನ್ನಯ್ಯ ಮೊದಲಾದ ದಲಿತರೊಡನೆ ತಮ್ಮ ಸಂಬಂಧವನ್ನು ಬೆಸೆದುಕೊಳ್ಳುತ್ತಾರೆ. ಕುಲಮದವನ್ನು ಕಳೆದುಕೊಳ್ಳುವ ಅದರ ಕಳಕಳಿ ಇನ್ನೂ ಅನೇಕ ವಚನಗಳಲ್ಲಿ ಪರಿಣಾಮಕಾರಿಯಾಗಿ ಬಂದಿದೆ.

ಅಪ್ಪನು ನಮ್ಮ ಮಾದಾರ ಚೆನ್ನಯ್ಯ
ಬೊಪ್ಪನು ನಮ್ಮ ಡೋಹರ ಕಕ್ಕಯ್ಯ
ಚಿಕ್ಕಯ್ಯ ನೆಮ್ಮಯ್ಯ ಕಾಣಯ್ಯ
ಅಣ್ಣನು ನಮ್ಮ ಕಿನ್ನರ ಬೊಮ್ಮಯ್ಯ
ಎನ್ನನೇತಕ್ಕರಿಯಿರಿ, ಕೂಡಲಸಂಗಯ್ಯಾ?
ಎಮ್ಮ ತಾಯಿ ನಿಂಬಿಯವ್ವೆ ನೀರನೆರೆದುಂಬಳು
ಎಮ್ಮಯ್ಯ ಚೆನ್ನಯ್ಯ ರಾಯ ಕಂಪಣದ ಹೇರುವ
ಎಮಗೆ ಆರೂ ಇಲ್ಲವೆಂಬರಿ
ಎಮ್ಮಕ್ಕ ಕಂಚಿಯಲ್ಲಿ ಬಾಣಸವ ಮಾಡುವಳು

ಎಮಗೆ ಆರೂ ಇಲ್ಲವೆಂಬಿರಿ
ಎಮ್ಮ ಅಜ್ಜರ ಅಜ್ಜರು ಹಡೆದ ಭಕ್ತಿಯ ನಿಮ್ಮ ಕೈಯಲು ಕೊಂಬೆ
ಕೂಡಲಸಂಗಮದೇವಾ.

ಹರನು ಮೂಲಿಗನಾಗಿ, ಪುರಾತರೊಳಗಾಗಿ
ಬಳಿ ಬಳಿಯಲು ಬಂದ ಮಾದಾರನ ಮಗ ನಾನಯ್ಯ
ಕಳೆದ ಹೊಲೆಯ ನೆಮ್ಮಯ್ಯ, ಜಾತಿ ಸೂತಕ
ಮಾದಾರನ ಮಗ ನಾನಯ್ಯ
ಚನ್ನಗಭೂಷಣ ಕೂಡಲ ಸಂಗಯ್ಯ
ಚೆನ್ನಯ್ಯನೆನ್ನ ಮುತ್ತಯ್ಯನಜ್ಜನಪ್ಪನಯ್ಯಾ.

ಎಂದು ತಾವು ಹುಟ್ಟಿದ ಉತ್ತಮ ಜಾತಿಯ ಅಹಂಕಾರವನ್ನು ನಿರಸನಗೊಳಿಸಿಕೊಳ್ಳಲು ನಿರಂತರವಾಗಿ ಹಾತೊರೆಯುತ್ತಾರೆ. ಇದರ ಅರ್ಥ ಆ ಅಹಂಕಾರ ಮತ್ತೆ-ಮತ್ತೆ ತಲೆಯೆತ್ತುತ್ತಿತ್ತು ಎಂದಲ್ಲ ಆ ಅಹಂಕಾರ ಅಳಿದುದನ್ನು ಅರಿಯಗೊಡದ ನಿರಂಜನ ನಿಲುವು ಅವರದು. ಆದರೆ ಲೌಕಿಕ ಜಗತ್ತು ಅವರನ್ನು ಆ ಹಿನ್ನೆಲೆಯಲ್ಲಿಯೇ ನೋಡಲು ಪ್ರಯತ್ನಿಸುತ್ತಿತ್ತು. ಮತ್ತೆ ಮತ್ತೆ ಅದನ್ನು ಅವರ ನೆನೆಪಿಗೆ ತರುತ್ತಿತ್ತು. ಅದರಿಂದ ಅವರು ರೊಸಿ ಇಂತಹ ಮಾತುಗಳನ್ನು ಹೇಳಿರುವುದು ಕಾಣುತ್ತದೆ.[೧]

'ಬ್ರಾಹ್ಮಣನಾಗಿ ಹುಟ್ಟಿದ್ದು ನನ್ನ ತಪ್ಪೇ? ಅದು ನನ್ನ ವಿಧಿ' ಎಂದು ನೊಂದು ನುಡಿಯುತ್ತ ಆ ಹೊರೆಯಿಂದ ತಪ್ಪಿಸಿಕೊಂಡಿರುವುದಾಗಿ ಹೇಳುತ್ತಾರೆ.

ಸೆಟ್ಟಿಯೆಂಬನೆ ಸಿರಿಯೊಳನ?
ಮಡಿವಾಳನೊಂಬೆನೆ ಮಾಚಯ್ಯನ?
ಡೋಹರನೆಂಬನೆ ಕಕ್ಕಯ್ಯನ?
ಮಾದಾರನೆಂಬನೆ ಚೆನ್ನಯ್ಯನ?
ಆನು ಹಾರುವನೆಂದಡೆ ಕೂಡಲಸಂಗಯ್ಯ ನಗುವನಯ್ಯಾ.

ಎನ್ನುತ್ತಾರೆ. ಹುಟ್ಟಿನಿಂದ ಅವರು ಹಾರುವರೆಂದು ಹೇಳುವತ್ತಿರುವವರನ್ನು ಕಂಡು ಹುಟ್ಟಿನ ಮಹತ್ವವನ್ನು ನಿರಾಕರಿಸುತ್ತಾ ಒಂದು ಕಡೆ ಹೀಗೆ ಹೇಳುತ್ತಾರೆ.

ಚೆನ್ನಯ್ಯನ ಮನೆಯ ದಾಸನ ಮಗನು
ಕಕ್ಕಯ್ಯ ಮನೆಯ ದಾಸಿಯ ಮಗಳು

೧. ವಚನ ಚಳವಳಿ, ಡಾ. ಎಚ್.ತಿಪ್ಪೇರುದ್ರಸ್ವಾಮಿ, ಪುಟ ೨೨.

ಇವರಿಬ್ಬರು ಹೊಲದಲು ಬೆರಣಗೆ ಹೋಗಿ, ಸಂಗವ ಮಾಡಿದರು.

ಇವರಿಬ್ಬರಿಗೆ ಹುಟ್ಟಿದ ಮಗ ನಾನು
ಕೂಡಲ ಸಂಗಮದೇವ ಸಾಕ್ಷಿಯಾಗಿ

ಹುಟ್ಟಿದ ವಂಶವನ್ನು ದೊಡ್ಡದು ಮಾಡಿ ಹೇಳಿಕೊಳ್ಳುವುದನ್ನು ನಿರಾಕರಿಸಲು ಇಷ್ಟು ದೂರ ಹೊಗಿ ಇಂತಹ ಕಠಿಣವಾದ ಮಾತುಗಳನ್ನಾಡಿದ್ದಾರೆ.

ಬ್ರಾಹ್ಮಣ ವರ್ಗದ ಬಗ್ಗೆ ಅಪಾರ ಸಿಟ್ಟು ಆಕ್ರೋಶಗಳಿರುವುದನ್ನು ಬಸವಣ್ಣನವರ ವಚನಗಳಲ್ಲಿ ಕಾಣಬಹುದು. ಬ್ರಾಹ್ಮಣ ವರ್ಗದಲ್ಲಿದ್ದ ನಡೆ–ನುಡಿಗಿರುವ ಅಪಾರ ಅಂತರ ಬಸವಣ್ಣನವರ ಅಪಾರ ಟೀಕೆಗೆ ಗುರಿಯಾಯಿತು.

ಇಟ್ಟಿಯ ಹಣ್ಣ ನರಿ ತಿಂದು ಸೃಷ್ಟಿ ತಿರುಗುತ್ತೆಂಬಂತೆ
ಮಟ್ಟಿಯನಿಟ್ಟ ದ್ವಿಜರ ಮಾತದೇಕೆ?
ಹಗಲುಗಾಣದ ಗೂಗೆ ಇರುಳಾಯಿತ್ತೆಂದಡೆ
ಜಗಕೆ ಇರುಳಪ್ಪುದೆ ಮರುಳೆ?
ಹೋಮದ ನೆವದಲ್ಲಿ ಹೋತನು ಕೊಂದುಲೆಂಬ
ಅನಾಮಿಕರೊಡನಾಡಿ ಗೆಲಿವುದೇನು?
ಕೂಡಲಸಂಗಮ ದೇವಾ.

ಬ್ರಾಹ್ಮಣ ವರ್ಗದಲ್ಲಿದ್ದ ಹಲವು ಅರ್ಥವಿಲ್ಲದ ಬಹಿರಂಗ ಆಚಾರಗಳನ್ನು ಸಹ ಬಸವಣ್ಣನವರು ವಿಡಂಬಿಸಿದರು.

ಮೀಂಬುಲಿಗನ ಹಕ್ಕಿಯಂತೆ ನೀರ ತಡಿಯಲಿದ್ದು
ಮೂಗ ಹಿಡಿದು ಧ್ಯಾನ ಮಾಡುವರಯ್ಯ
ಬಿಟ್ಟಮಂಡೆವರೆಸಿ ಬಾಯ ಮಿಡುರೆನುತ
ಕಣ್ಣಮುಚ್ಚಿ ಬೆರಳನೆಣಿಸುವರಯ್ಯಾ
ತಮ್ಮ ಕೈಯಲಿ ಕಟ್ಟಿದ ದರ್ಬೆಯ ಹುಲ್ಲು
ಕೂಡಲಸಂಗನರಿಯದೆ ಮೊರೆಯಿಡುವಂತೆ.

ನೀರಕಂಡಲ್ಲಿ ಮುಳುಗುವರಯ್ಯಾ
ಮರನ ಕಂಡಲ್ಲಿ ಸುತ್ತುವರಯ್ಯ
ಬತ್ತುವ ಜಲವ ಒಣಗುವ ಮರವ
ಮೆಚ್ಚಿದರು ನಿಮ್ಮನೆತ್ತ ಬಲ್ಲರು?
ಕೂಡಲಸಂಗಮದೇವಾ.

ತತ್ತ್ವಗಳನ್ನು ಒಪ್ಪುವ ಉತ್ತಮ ವರ್ಗ ಅಥವಾ ಬ್ರಾಹ್ಮಣವರ್ಗ ಅದಕ್ಕೆ ವಿರುದ್ಧವಾಗಿ ನಡೆಯುವುದನ್ನು ಕಂಡು ಕೆರಳಿ ಕಟುವಾಗಿ ಹೀಗೆ ಹೇಳುತ್ತಾರೆ. ವೇದವನೋದಿದ ವಿಪ್ರರು ಹೊನಲಲ್ಲಿ ಹೋದ ಕೇಡ ನೋಡಿರೇ!

'ಭರ್ಗೋ ದೇವಸ್ಯ ಧೀಮಹಿ' ಎಂಬರು
ಒಬ್ಬರಿಗಾಗಿ ವಿಚಾರವಿಲ್ಲ ನೋಡಿರೇ
ಕೂಡಲ ಸಂಗಮದೇವಾ.

ಬ್ರಾಹ್ಮಣ ವರ್ಗದ ಧಾರ್ಮಿಕ ನೆಲೆಗಳು ಹಾಗೂ ಆಚರಣೆಗಳ ಟೀಕೆ ಬಸವಣ್ಣನವರ ವಚನಗಳಲ್ಲಿ ತೀಕ್ಷ್ಣವಾಗಿ ನಡೆದಿದೆ. ವೇದಶಾಸ್ತ್ರ ಪುರಾಣಗಳನ್ನು ಬ್ರಾಹ್ಮಣರು ಸ್ವಾರ್ಥ ಸಾಧನೆಗಾಗಿ ಬಳಸಿಕೊಂಡಿದ್ದರಿಂದ ಬಸವಣ್ಣನವರ ಹರಿತ ನುಡಿ ವೇದ ಶಾಸ್ತ್ರ ಪುರಾಣಗಳನ್ನು ಕಟ್ಟಿಹಾಕುತ್ತದೆ.

ನೀವು ಹಿರಿಯರೆಂಬಿರಿ, ಕರ್ಮಿಗಳು, ನೀವು ಕೇಳಿರಿ
ನಿಮ್ಮ ವೇದಶಾಸ್ತ್ರಂಗಳು ಆರ ಹೊಗಳುತ್ತಿದ್ದಾವು?
'ಓಂ ದ್ಯಾವಾ ಭೂಮೀ ಜನಯನ್ ದೇವ ಏಕೋ ದೇವ'
ಎಂದು ಶ್ರುತಿ ಸ್ಮೃತಿಗಳು ಸಾರುತ್ತಿದ್ದವು.
'ವರ್ಣಾನಾಂ ಬ್ರಾಹ್ಮಣೋ ಗುರುಃ ಎಂಬುದು ಹುಸಿ,
ವರ್ಣಾನಾಂ ಗುರುಃ' ನಮ್ಮ ಕೂಡಲ ಸಂಗನ ಶರಣರು.
ವೇದಕ್ಕೆ ಒರೆಯ ಕಟ್ಟುವೆ, ಶಾಸ್ತ್ರಕ್ಕೆ ನಿಗಳವನಿಕ್ಕುವೆ
ತರ್ಕದ ಬೆನ್ನಬಾರನೆತ್ತುವ ಆಗಮದ ಮೂಗ ಕೊಯಿವೆ,
ನೋಡಯ್ಯ
ಮಹಾದಾನಿ ಕೂಡಲ ಸಂಗಮದೇವಾ
ಮಾದಾರ ಚೆನ್ನಯ್ಯನ ಮನೆಯ ಮಗ ನಾನಯ್ಯ.

ಯಜ್ಞಯಾಗ ಹವಿಸ್ಸು ಮುಂತಾದ ವೈದಿಕ ಆಚರಣೆಗಳ ಹೀಯಾಳಿಕೆಯು ಬಸವಣ್ಣನವರ ವಚನಗಳಲ್ಲಿ ಪ್ರಮುಖ ಗುರಿಯಾಗಿದೆ. ವೇದ ಪುರಾಣದ ಮಾತು ವಿವರಗಳಿಂದಲೇ ಅವುಗಳ ಮಾನವೀಯ ಅಲ್ಲದ ಅಂಶಗಳನ್ನು ಹೇಳುವುದು ಬಸವಣ್ಣನವರು ಮುಖ್ಯವಾಗಿ ಅನುಸರಿಸಿದ ಕ್ರಮ.

ಬ್ರಾಹ್ಮಣ ದೈವವೆಂದು ನಂಬಿದ ಕಾರಣ
ಗೌತಮಮುನಿಗೆ ಗೋವಧೆಯಾಯಿತ್ತು.

ಬ್ರಾಹ್ಮಣನೆ ದೈವವೆಂದು ನಂಬಿದ ಕಾರಣ
ಬಲಿಗೆ ಬಂಧನವಾಯಿತು.
ಬ್ರಾಹ್ಮಣನೆ ದೈವವೆಂದು ನಂಬಿದ ಕಾರಣ
ಕರ್ಣನ ಕವಚ ಹೋಯಿತು.

ಪುರಾಣಗಳ ವಿವರಗಳು ಇಲ್ಲಿ ಉಪಯೋಗಿಸಲ್ಪಟ್ಟ ರೀತಿಯನ್ನು ಗಮನಿಸಬಹುದಾಗಿದೆ. ಪುರಾಣಗಳ ಟೀಕೆಯು ಬಸವಣ್ಣನವರ ವಚನಗಳಲ್ಲಿ ಬಹುಸಂಖ್ಯೆಯಲ್ಲಿ ಸಿಗುತ್ತವೆ. ಬ್ರಾಹ್ಮಣಶೂದ್ರ ವರ್ಗಗಳ ನಡುವೆ ಸಾಂಸ್ಕೃತಿಕ ಸಂಬಂಧಗಳನ್ನು ನೆಲೆಯೂರುವಂತೆ ಮಾಡುವಲ್ಲಿ ಪುರಾಣಗಳ ಪಾತ್ರ ಮಹತ್ವದ್ದೇ ಆಗಿದೆ. ಹೀಗಾಗಿ ಇವುಗಳನ್ನು ನಿರಾಕರಿಸಬೇಕೆನ್ನುವ ಬಸವಣ್ಣನವರ ಧೋರಣೆಯು ಮೂಲಭೂತವಾಗಿ ಶ್ರೇಣಿಕೃತ ಮೌಲ್ಯಗಳನ್ನು ಹೊಂದಿಯೇ ಹಿಂದೂ ಧಾರ್ಮಿಕ ವ್ಯವಸ್ಥೆಯ ತಳಹದಿಯ ಮೇಲೆ ಇದ್ದಂಥ ವರ್ಗಗಳಿಗೆ ಒಟ್ಟು ಆ ವ್ಯವಸ್ಥೆಯ ಕೆಟ್ಟ ಅಂಶಗಳನ್ನು ಎತ್ತಿ ತೋರಿಸಬೇಕೆನ್ನುವುದೇ ಆಗಿದೆ. ಆದ್ದರಿಂದಲೇ ವೈದಿಕ ಆಚರಣೆಗಳ ಟೀಕೆಯೂ ಇವರ ವಚನಗಳಲ್ಲಿ ಪೂರಕವಾಗಿಯೇ ಬರುತ್ತವೆ.

ಹೋಮದ ನೆವದಲ್ಲಿ ಹೋತನು ಕೊಂದ ತಿಂಬ
ಅನಾಮಿಕ ರೊಡನಾಡಿ ಗೆಲಿವುದೇನು?
ಕೂಡಲ ಸಂಗಮದೇವಾ.

ಕಿಚ್ಚು ದೈವವೆಂದು ಹವಿಯನಿಕ್ಕುವ ಹಾರುವರ ಮನೆಯಲು
ಕಿಚ್ಚೆದ್ದು ಸುಡುವಾಗ
ಬಚ್ಚಲ ನೀರ, ಬೀದಿಯ ದೂಳ ಹೊಯ್ದು
ಬೊಬ್ಬಿಟ್ಟೆಲ್ಲರ ಕರೆವರಯ್ಯಾ
ಕೂಡಲ ಸಂಗಮದೇವಾ
ವಂದನೆಯ ಮರೆದು ನಿಂದಿಸುತ್ತಿದ್ದರು.

ಎನ್ನುವ ವಚನಗಳಲ್ಲಿ ಈ ಆಚರಣೆಗಳ ಅರ್ಥಹೀನತೆಯನ್ನು ಎತ್ತಿಹೇಳಲಾಗಿದೆ. ಬಸವಣ್ಣನವರು ಧಾರ್ಮಿಕ ವ್ಯವಸ್ಥೆಯ ಮೂಲವನ್ನೇ ಹಿಡಿದು ಅಲ್ಲಾಡಿಸಿದರು. ಧರ್ಮವನ್ನೇ ಅವರು ನಿರಾಕರಿಸಲಿಲ್ಲ. ಅದರ ಮೇಲೆ ದಟ್ಟವಾಗಿ ಬೆಳೆದು ಪರೋಪಜೀವಿ ಬಂಧನಗಳಂತಿದ್ದ ಸಂಪ್ರದಾಯಗಳನ್ನು ಕತ್ತರಿಸಿ ಹಾಕಿದರು. ಅತ್ಯಂತ ವೈಜ್ಞಾನಿಕವಾದ ವಿಚಾರನಿಷ್ಠೆಯಿಂದ ಅವುಗಳನ್ನು ಕಟುಪರೀಕ್ಷೆಗೆ ಒಳಪಡಿಸಿದರು

ಗಟ್ಟಿಯಾದವುಗಳನ್ನು ಉಳಿಸಿಕೊಂಡು ತಮ್ಮ ಅನುಭಾವದಿಂದ ಅವುಗಳಿಗೆ ಹೊಸ ಹೊಳಪನ್ನು ಕೊಟ್ಟರು ಜೊಳ್ಳುಗಳನ್ನು ಜಾಲಾಡಿ ಜೊಂಡುಗಳನ್ನು ಕಿತ್ತೆಸೆದರು. ಅದರಲ್ಲೂ ಮುಖ್ಯವಾಗಿ ಯಜ್ಞ, ಯಾಗದಿಗಳು ಮತ್ತು ಅದರ ಸುತ್ತ ಹರಡಿದ್ದ ಶೋಷಣೆಯ ಜಾಲಗಳು ಮೊದಲ ಕರ್ಮಯಜ್ಞಕ್ಕಿಂತ ಜ್ಞಾನದ ಮೂಲಕ ಕೈಗೊಳ್ಳುವ ಅನುಸಂಧಾನವೇ ಶ್ರೇಷ್ಠವೆಂದು ಉಪನಿಷತ್ತುಗಲು ಹೇಳಿದ್ದರೂ ಕರ್ಮಗಳ ಪ್ರಾಬಲ್ಯ ನಿಂತಿರಲಿಲ್ಲ. ಧರ್ಮದ ಹೆಸರಿನಲ್ಲಿ ಉತ್ತಮರೆಂದು ಹೇಳಿಕೊಂಡು ಪಶುಬಲಿ ಕೊಡುವುದು ಬಸವಣ್ಣನವರಿಗೆ ಅಸಹನೆಯನ್ನುಂಟುಮಾಡಿತು. ಅದನ್ನು ಶಾಸ್ತ್ರಾಧಾರ-ಗಳಿಂದ ಸಾರೋದ್ಧಾರವಾಗಿ ಬೆಳೆಸಿಕೊಂಡು ಬರುತ್ತಿರುವುದನ್ನು ಕಂಡು ಅವರು ಕೆರಳಿದರು. ವೇದಶಾಸ್ತ್ರಗಳಲ್ಲಿ ಹೇಳಿರುವ ಹಿಂಸಾಚಾರದ ಮಾರ್ಗವನ್ನು ಬಸವಣ್ಣ-ನವರು ಕಟುವಾಗಿ ಖಂಡಿಸುತ್ತಾರೆ.

ಮಾತಿನ ಮಾಂತಿಗೆ ನಿನ್ನ ಕೊಂದಹರೆಂದು
ಎಲೆ ಹೋತೇ ಅಳು ಕಂಡಾ
ವೇದವನೋದಿದವರ ಮುಂದೆ ಅಳುಕಂಡಾ!
ಶಾಸ್ತ್ರವಕೇಳಿದವರ ಮುಂದೆ ಅಳು ಕಂಡಾ
ನೀನತ್ತುದಕ್ಕೆ ತಕ್ಕುದ ಮಾಡುವ ಕೂಡಲ ಸಂಗಮದೇವಾ.

ವೇದಗಳಲ್ಲಿ ಹೇಳಿದೆ ಎಂದು ನಿಷ್ಕಾರಣವಾಗಿ ನಿನ್ನನ್ನು ಕೊಲ್ಲುತ್ತಾರೆ. ಅದಕ್ಕಾಗಿ ವೇದವನೋದಿದವರ ಮುಂದೆ ನೀನು ಅಳು, ಶಾಸ್ತ್ರವನೋದಿದವರ ಮುಂದೆ ನೀನು ಅಳು, ನೀನು ಅತ್ತ ಮಾತ್ರಕ್ಕೆ ಮನಕರಗಿ ನಿನ್ನನ್ನು ಅವರು ಬಿಡುವವರಲ್ಲ. ಆದರೆ ನೀನತ್ತುದಕ್ಕೆ ತಕ್ಕ ಫಲ ಅವರು ಪಡೆಯಲೇಬೇಕಾಗುತ್ತದೆ.

ನಿಮ್ಮ ವಚನ ಪುಣ್ಯವೆಂಬುದು ಹುಸಿಯಾಯಿತು, ನೋಡಾ
ಶಾಸ್ತ್ರದ ವಚನ ಹೋತಿಂಗೆ ಮಾರಿ
ಎಂತು ನಂಬುವೆನಯ್ಯೊ?
ನಾನು ಕೊಲ್ಲೆ, ನೇಣು ಕೊಂದಿತ್ತೆಂಬ ಸೊನೆಗಾರನೇನೆಂಬೆ
ಕೂಡಲ ಸಂಗಮದೇವಾ.

ಯಜ್ಞಯಾಗಾದಿಗಳಲ್ಲಿ ಪಶುವಧೆ ಮಾಡುವವರನ್ನು ಕಟುಕರು ಎಂದು ಬಸವಣ್ಣ ಕರೆಯುತ್ತಾರೆ. ಇದರ ಜೊತೆಗೆ ಇಷ್ಟೇ ಖಂಡನೀಯವಾಗಿ ಅವರಿಗೆ ಕಂಡದ್ದು, ಯಜ್ಞದ ಬೆಂಕಿಯಲ್ಲಿ ಸುರಿಯುವ ಹಾಲು-ತುಪ್ಪ ಮೊದಲಾದ ಆಹಾರ ಪದಾರ್ಥಗಳ

ದುರ್ವ್ಯಯ, ಅಮೂಲ್ಯವಾದ ಆಹಾರವಸ್ತುಗಳನ್ನು ಸುಡುವುದನ್ನು ವಿರೋಧಿಸಿ ವೈಚಾರಿಕ ಪ್ರತಿಭಟನೆಯಿಂದ ಸಮಸ್ಯೆ ಮನಸ್ಸನ್ನು ಅದರ ವಿರುದ್ಧ ತಿರುಗಿಸಲು ಪ್ರಯತ್ನಿಸಿದರು. ಬೆಂಕಿಯೇ ದೈವವೆಂದು ನಂಬಿದವರನ್ನು ವಿಡಂಬಿಸಿದ ಬಸವಣ್ಣನವರು ಅವರ ಭಕ್ತಿಯನ್ನು ಕಂಡು ಕೋಪಗೊಂಡರು.

ಹಾರುವವ ಭಕ್ತಿ ಓದಿನೊಳಗೆ ಅಗೆಯ ಹೊಯ್ದಂತೆ;
ಕಳಯಿಂಕೆ ಬೇರೂರದು ಮೇಲೆ ಫಲವಾಗದು!
ಪ್ರಾಣಲಿಂಗದ ಪ್ರಸಾದವ ಮುಂದಿಟ್ಟುಕೊಂಡು
'ಪ್ರಾಣಾಯ ಸ್ವಾಹಾ, ಅಪಾನಾಯ ಸ್ವಾಹಾ, ವ್ಯಾಸಾಯ ಸ್ವಾಹಾ
ಉದಾನಾಯ ಸ್ವಾಹಾ, ಸಮಾನಾಯ ಸ್ವಾಹಾ' ಎಂಬ
ಕರ್ಮಿಗಳನೇನೆಂಬೆ, ಕೂಡಲಸಂಗಮದೇವಾ?

ಇಲ್ಲಿ ಗಮನಿಸಬೇಕಾದ ಮುಖ್ಯವಾದ ಮಾತು ಪ್ರಾಣಧಾರಣೆಗೆ ಅಗತ್ಯವಾದ ಪ್ರಸಾದವನ್ನು ಮುಂದಿಟ್ಟುಕೊಂಡು ಅದನ್ನು ಬೆಂಕಿಗೆ ಹಾಕಿ ಸುತ್ತುತ್ತಿರುವ ಚಿತ್ರವನ್ನು ಕುರಿತದ್ದು. ಆಹಾರವನ್ನು ಬಹಳ ಪವಿತ್ರ ಭಾವನೆಯಿಂದ ಕಾಣುವ ಬಸವಣ್ಣನವರು ಅದನ್ನು ಬೆಂಕಿಗೆ ಸುಡುವುದನ್ನು ಕಂಡು ಸಹಿಸದಾದರು. ಮಹಾಯಜ್ಞಗಳದ್ದು ಉನ್ನತಮಟ್ಟದ ಶೋಷಣೆಯಾದರೆ ದೇವಾಲಯಗಳಲ್ಲಿ ನಡೆಯುತ್ತಿದ್ದ ನಿತ್ಯ ಹೋಮ ಹವನಾದಿಗಳು, ಪೂಜಾ ಪರಿಕರ್ಮಗಳು ಜನಸಾಮಾನ್ಯರನ್ನು ದಿನ-ದಿನವೂ ಶೋಷಿಸುವ ವ್ಯವಸ್ಥೆಯನ್ನು ಮಾಡಿಕೊಂಡಿದ್ದವು.

ಧರ್ಮವನ್ನು ದೇವಾಲಯಗಳಿಂದ ಹೊರಗೆ ತಂದದ್ದು ಬಸವಣ್ಣನವರ ಮಹಾಸಾಧನೆ ದೇವಾಲಯಗಳು ಅಂದಿನ ಧಾರ್ಮಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಜೀವನದಲ್ಲಿ ಪ್ರಮುಖ ಪಾತ್ರವಹಿಸುತ್ತಿದ್ದವು. ಹಬ್ಬ-ಹರಿದಿನಗಳಲ್ಲಿ ಜನ ಒಟ್ಟಾಗಿ ಸೇರುವ ಗ್ರಾಮ ಕೇಂದ್ರಗಳಾಗಿದ್ದವು. ಜೊತೆಗೆ ದೇವಾಲಯಗಳು ಅತಿಯಾಗಿ ಬೆಳೆದು ಪುರೋಹಿತಶಾಹಿಯ ಆಶ್ರಯಸ್ಥಾನಗಳೂ ಆಗಿದ್ದವು. ಶ್ರೀಮಂತಿಕೆಯ ಆಗರಗಳಾಗಿ ಎಲ್ಲ ಬಗೆಯ ಅಧಃಪತನಕ್ಕೆ ಕಾರಣವಾಗಿದ್ದವು. ಕಲೆ ನೆಪದಿಂದ ಪ್ರಾರಂಭವಾದ ನರ್ತಕಿಯರ ಸೇವೆ ದೇವದಾಸಿ ಪದ್ಧತಿಯಾಗಿ ಬೆಳೆದು ದೇವಾಲಯಗಳನ್ನು ಕಲುಷಿತಗೊಳಿಸುತ್ತಿತ್ತು.[೧] ಆದಕಾರಣದಿಂದಲೇ ಬಸವಣ್ಣನವರು ಸ್ಥಾವರಕ್ಕೆ ಬದಲಾಗಿ ಜಂಗಮಕ್ಕೆ ಮಹತ್ವಕೊಟ್ಟರು.

---

೧. ವಚನ ಚಳವಳಿ, ಡಾ. ಎಚ್.ತಿಪ್ಪೇರುದ್ರಸ್ವಾಮಿ, ಪುಟ ೬೦.

ಉಳ್ಳವರು ಶಿವಾಲಯವ ಮಾಡಿಹರು
ನಾನೇನ ಮಾಡುವೆ ಬಡವನಯ್ಯಾ
ಎನ್ನ ಕಾಲೇ ಕಂಬ, ದೇಹವೇ ದೇಗುಲ
ಶಿರ ಹೊನ್ನ ಕಲಶವಯ್ಯಾ
ಕೂಡಲ ಸಂಗಮದೇವಾ ಕೇಳಯ್ಯಾ
ಸ್ಥಾವರಕ್ಕೆ ಅಳಿವುಂಟು, ಜಂಗಮಕ್ಕಳಿವಿಲ್ಲ.

ಸಮಾಜದ ಕೆಳಗಿನ ಹಂತಗಳಲ್ಲಿ ಧರ್ಮದ ಸ್ಥಿತಿ ಇನ್ನೂ ಶೋಚನೀಯವಾಗಿತ್ತು. ಕ್ಷುದ್ರ ದೇವತೆಗಳನ್ನು ಮಾರಿಮಸಣಿಗಳನ್ನು ಬೀರಯ್ಯ, ಕೇತಯ್ಯ ಮೊದಲಾದ ಗ್ರಾಮ ದೇವತೆಗಳನ್ನು ಹಿಂಸಾಚಾರದಿಂದ ನೂರಾರು ಕುರಿಕೋಣಗಳ ಬಲಿಯನ್ನಿತ್ತು, ಪೂಜಿಸುವ ಕ್ರೂರ ಪದ್ಧತಿ ಪ್ರಚಲಿತವಾಗಿತ್ತು. ಅಂಟು ಜಾಡ್ಯಗಳೂ ದೇವತೆಗಳಾಗಿದ್ದವು. ದೈವಗಳ ನಾನಾ ಸ್ವರೂಪವನ್ನು ತೋರುವ ಅನೇಕ ರಚನೆಗಳನ್ನು ನಾವು ಬಸವಣ್ಣನವರ ವಚನಗಳಲ್ಲಿ ಕಾಣಬಹುದು.

ಹಾಳು ಮೊರಡಿಗಳಲ್ಲಿ ಊರ ದಾರಿಗಳಲ್ಲಿ
ಕೆರೆಬಾವಿ ಹೂಗಿಡು ಮರುಗಗಳಲ್ಲಿ
ಗ್ರಾಮಮಧ್ಯಗಳಲ್ಲಿ ಚೌಪಥ ಪಟ್ಟಣ ಪ್ರವೇಶದಲ್ಲಿ
ಹಿರಿಯಾಲದ ಮರದಲ್ಲಿ ಮನೆಯ ಮಾಡಿ,
ಕರೆವೆಮ್ಮೆ, ಹಸುಗೂಸು, ಬಸುರಿ, ಬಾಣತಿ
ಕುಮಾರಿ ಕೊಡಗೂಸೆಂಬರು ಹಿಡಿದುಂಬ ತಿರಿದುಂಬ
ಮಾರಯ್ಯ ಬೀರಯ್ಯ ಕೇಚರಗಾವಿಲ ಅಂತರ ಬೆಂತರ
ಕಾಳಯ್ಯ ದೂಳಯ್ಯ ಮಾಳಯ್ಯ ಕೇತಯ್ಯಗಳೆಂಬ ನೂರು ಮಡಕೆಗೆ
ನಮ್ಮ ಕೂಡಲಸಂಗಮದೇವ ಶರಣೆಂಬುವುದೊಂದೆ ದಡಿ ಸಾಲದೆ?

ಕ್ಷುದ್ರ ದೇವತೆಗಳು ಒಂದೆರಡಲ್ಲ ಲೌಕಿಕ ಸುಖದ ಬಯಕೆಯಿಂದ ನೂರಾರು ದೇವತೆಗಳನ್ನು ಕಲ್ಪಿಸಿಕೊಂಡು ಭಕ್ತಿಯು ಆ ದೈವಗಳಲ್ಲಿ ಕ್ಷುದ್ರವಿಷಯಗಳಾಗಿ ಹರಿದು ಹಂಚಿಹೋಗುತ್ತಾರೆ. ಅರಗಿನಿಂದ ಮಾಡಿದ ದೈವಗಳು, ಲೋಹದಿಂದ ಮಾಡಿದ ದೈವಗಳು ಉರಿಗೆ ಕರಗಿಹೋಗುತ್ತವೆ. ಈ ವಿಗ್ರಹ ರೂಪದ ದೇವತೆಗಳು ಕೃತಕ ಭಕ್ತಿಗೆ ಕಾರಣವಾಗುತ್ತವೆ.

ಅರಗು ತಿಂದು ಕರಗುವ ದೈವವ
ಉರಿಯ ಕಂಡಡೆ ಮುರುಟುವ ದೈವವನೆಂತು ಸರಿಯೆಂಬೆನಯ್ಯಾ?
ಅವಸರ ಬಂದಡೆ ಮಾರುವ ದೈವವನೆಂತು ಸರಿಯಂಬೆನಯ್ಯಾ?
ಅಂಜಿಕೆಯಾದಡೆ ಹೂಳುವ ದಯವವನೆಂತು ಸರಿಯಂಬೆನಯ್ಯಾ?
ಸಹಜ ಸ್ವಾಭಾವಿಕ ನಿಜೈಕ್ಯ ಕೂಡಲಸಂಗಮದೇವನೊಬ್ಬನೆ ದೇವ.

– ಮಾರಿಸಿಕೊಳ್ಳುವ, ಒತ್ತೆಯಿರಿಸಿಕೊಳ್ಳುವ ದೇವರುಗಳನ್ನು ವಿಡಂಬಿಸಿ ಮಾರಲಾಗದ ಒತ್ತೆಯಿಡಲಾಗದ ಕೂಡಲಸಂಗನ ಭಕ್ತಿನಿಷ್ಠೆಯನ್ನು ಹೇಳಿದ್ದಾರೆ.

ಮಾರಿಕಟ್ಟೆಯ ನೋಂತು ಕೊರಳಲ್ಲಿ ಕಟ್ಟಿಕೊಂಬರು
ಸಾಲಬಟ್ಟಡೆ ಮಾರಿಕೊಂಬರಯ್ಯ!
ಸಾಲಬಟ್ಟಡೆ ಅವರನೊತ್ತೆಯಿಟ್ಟು ಕೊಂಡುಂಬರಯ್ಯಾ!
ಮಾರುವೋಗನೊತ್ತೆವೋಗ
ನಮ್ಮ ಕೂಡಲ ಸಂಗಮದೇವಾ.

ಮಡಕೆ ಮೊರ ಬೀದಿಯಕಲ್ಲು, ಹಣಿಗೆ, ಅಂದರೆ ಮಗ್ಗ, ಬಿಲ್ಲು ಕೊಳಗ, ಗಿಂಡಿ ಈ ಎಲ್ಲವೂ ದೇವರುಗಳೇ ಹೀಗೆ ಎಲ್ಲೆಲ್ಲಿಯೂ ದೇವರೇ ತುಂಬಿಕೊಂಡು ಕಾಲಿಡುವುದಕ್ಕೆ ಜಾಗವಿಲ್ಲದಂತಾಗಿದೆ, ಎಂದು ವಿಡಂಬಿಸಿದ್ದಾರೆ.

ಮಡಕೆದೈವ, ಮೊರದೈವ, ಬೀದಿಯ ಕಲ್ಲುದೈವ
ಹಣಿಗೆ ದೈವ, ಬಿಲ್ಲನಾರಿ ದೈವ ಕಾಣಿರೊ
ಕೊಳಗ ದೈವ, ಗಿಣ್ಣಲು ದೈವ ಕಾಣಿರೊ!
ದೈವ ದೈವವಂದು ಕಾಲಿಡಲಿಂಬಿಲ್ಲ
ದೈವನೊಬ್ಬನೆ ಕೂಡಲ ಸಂಗಮದೇವಾ.

ಮಾಯ, ಮಂತ್ರ, ಮಾಟ, ಶಕುನಾದಿಗಳಲ್ಲಿ ತಾಮಸಿಕ ಆರಾಧನೆ ವಿಜೃಂಭಿಸುತ್ತಿತ್ತು. ಇದು ಜನರನ್ನು ಅಂಧಶ್ರದ್ಧೆ, ಅವಿಚಾರಿತ ಕರ್ಮಗಳಲ್ಲಿ ಮುಳುಗಿಸಿತ್ತು. ಹೀಗೆ ಬಸವಣ್ಣನವರು ಒಂದು ಕಡೆ ಮೇಲುವರ್ಗದ ಶೋಷಣೆ, ಇನ್ನೊಂದು ಕಡೆ ಜನಸಾಮಾನ್ಯರ ಅಜ್ಞಾನ ಎರಡನ್ನೂ ಕಂಡರು. ಒಂದೇ ಏಟಿನಿಂದ ಈ ಎರಡನ್ನೂ ಹೊಡೆದುರುಳಿಸುವ ವೈಚಾರಿಕ ಮಾರ್ಗವನ್ನು ರೂಢಿಸುವುದೇ, ಬಸವಣ್ಣನವರ ಕೇಂದ್ರಬಿಂದುವಾಯಿತು. ಅದಕ್ಕಾಗ ಅವರು ಬಳಸಿಕೊಂಡ ಸಾಧನ ಇಷ್ಟಲಿಂಗ, ಮಾಡುವ ಕೆಲಸದಲ್ಲಿ ಶ್ರದ್ಧೆ ಇದ್ದರೆ ಶುದ್ಧಿ ಇದ್ದರೆ ಬಾಹ್ಯ ಸಂಗತಿಗಳು ಏನು

ಮಾಡಿಯಾವು? ಎನ್ನಿಸಿರಬೇಕು. ತಮ್ಮ ತಪ್ಪನ್ನು ಅರಿತುಕೊಳ್ಳದೆ ಇನ್ನೊಬ್ಬರ ತಪ್ಪನ್ನು ಎತ್ತಿ ತೋರಿಸುವ ಟೀಕಿಸುವ ಜನರನ್ನು ಕಂಡು ಬಸವಣ್ಣನವರು ಇಂಥ ಚಿತ್ರಣವನ್ನು ನೀಡಿದ್ದಾರೆ. ನಮ್ಮಲ್ಲೇ ಸಾಕಷ್ಟು ದೋಷಗಳು ತುಂಬಿರುವಾಗ ಅದನ್ನು ಲೆಕ್ಕಿಸದೆ, ಇನ್ನೊಬ್ಬರ ದೋಷಗಳನ್ನು ಹುಡುಕುವವರನ್ನು ಕಂಡು ವಿಡಂಬಿಸಿ ನುಡಿಯುತ್ತಾರೆ.

ಹಾವಾಡಿಗನು ಮೂಕೊರತಿಯು – ತನ್ನ ಕೈಯಲ್ಲಿ ಹಾವು
ಮಗನ ಮದುವೆಗೆ ಶಕುನವ ನೋಡ ಹೋಹಾಗ
ಇದಿರಲೊಬ್ಬ ಮೂಕೊರತಿಯ ಹಾವಡಿಗನ ಕಂಡು
'ಶಕುನ ಹೊಲ್ಲೆಂಬ ಚದುರನ ನೋಡಾ!
ತನ್ನ ಸತಿ ಮೂಕೊರತಿ – ತನ್ನ ಕೈಯಲ್ಲಿ ಹಾವು!
ತಾನು ಮೂಕೊರೆಯ!
ತನ್ನ ಭಿನ್ನವನರಿಯದೆ ಅನ್ಯರನೆಂಬ
ಕುನ್ನಿಯ ನೇನೆಂಬ ಕೂಡಲ ಸಂಗಮದೇವಾ?

ಧರ್ಮ ಕೇವಲ ಕೆಲವರ ಗುತ್ತಿಗೆಯಲ್ಲ. ಎಲ್ಲರೂ ಧಾರ್ಮಿಕ ಆಚರಣೆಯಲ್ಲಿ ಸರ್ವಸಮಾನರು ಎಂಬ ಅಂಶವನ್ನು ಜನಮನದಲ್ಲಿ ಖಚಿತವಾಗಿ ಪ್ರತಿಬಿಂಬಿಸಿದರು. ತನ್ನ ಪರವಾಗಿ ಇನ್ನಾರೋ ಪೂಜೆಯನ್ನು ಮಾಡುತ್ತಾರೆನ್ನುವುದು, ಹಾಸ್ಯಾಸ್ಪದ. ತನ್ನ ಪೂಜೆಯನ್ನು ನಾನೇ ಮಾಡಿಕೊಳ್ಳಬೇಕು.

ನನ್ನ ಉದ್ಧಾರವನ್ನು ನಾನೇ ಕಂಡುಕೊಳ್ಳಬೇಕು, 'ಉದ್ದರೇದಾತ್ಮದಾತ್ಮನಂ' ಎಂದು ಭಗವದ್ಗೀತೆಯಲ್ಲಿ ಕೃಷ್ಣ ಹೇಳಿದ್ದೇನೋ ನಿಜ. ಆದರೆ ಮುಂದೆ ನಮ್ಮ ಧಾರ್ಮಿಕ ಬೆಳವಣಿಗೆ ಇದಕ್ಕೆ ವಿರುದ್ಧವಾಗಿ ಬೆಳೆದುಬಂದಿತು. ದೇವಾಲಯಗಳಲ್ಲಿ ಪೂಜೆಯನ್ನು ಮಾಡುವ ಒಂದು ವರ್ಗವೇ ನಿರ್ಮಾಣವಾಯಿತು. ಮುಂದೆ ಅದು ಪುರೋಹಿತಶಾಹಿಯಾಗಿ ಜನಸಾಮಾನ್ಯರನ್ನು ಶೋಷಣೆ ಮಾಡಿತು. ತನ್ನ ಪೂಜೆಯನ್ನು ಇನ್ನಾರಿಗೋ ಒಪ್ಪಿಸುವವರನ್ನು ಕಂಡು ಬಸವಣ್ಣನವರು

ತನ್ನಾಶ್ರಯದ ರತಿಸುಖವನು, ತಾನುಂಬ ಊಟವನು
ಬೇರೆ ಮತ್ತೊಬ್ಬರ ಕೈಯಲ್ಲಿ ಮಾಡಿಸಬಹುದೇ?
ತನ್ನ ಲಿಂಗಕ್ಕೆ ಮಾಡುವ ನಿತ್ಯ ನೇಮವತಾ ಮಾಡಬೇಕಲ್ಲದೆ
ಬೇರೆ ಮತ್ತೊಬ್ಬರ ಕೈಯಲ್ಲಿ ಮಾಡಿಸಬಹುದೇ?
ಕೆಮ್ಮನೆ ಉಪಚಾರಕ್ಕೆ ಮಾಡುವರಲ್ಲದೆ,
ನಿಮ್ಮನೆತ್ತ ಬಲ್ಲರು ಕೂಡಲಸಂಗಮದೇವಾ?

ಎಂದು ಕಟುವಾಗ ಕೇಳುತ್ತಾರೆ. ತನಗೂ ದೇವರಿಗೂ ಮಧ್ಯದಲ್ಲಿ ದಳ್ಳಾಳಿಗಳನ್ನು ತಂದುಕೊಳ್ಳಬಾರದೆಂಬುದು ಬಸವಣ್ಣನವರ ಆಶಯ. ಹಲವಾರು ಅನ್ಯಾಯ ಮಾರ್ಗಗಳಿಂದ ಅಪಾರವಾಗಿ ಧನಸಂಪಾದಿಸಿ ಆ ಪಾಪವನ್ನು ಕಳೆದುಕೊಳ್ಳುವ ಸಲುವಾಗಿ ದೇವರನ್ನು ಭಾಗಿಯಾಗಿ ಮಾಡಿಕೊಳ್ಳುವವರನ್ನು ಕಂಡು ಬಸವಣ್ಣನವರು ಕೋಪಗೊಳ್ಳುತ್ತಾರೆ.

ಪಾಪಿಯ ಧನಪ್ರಾಯಶ್ಚಿತ್ತಕ್ಕಲ್ಲದೆ ಸತ್ಪಾತ್ರಕ್ಕೆ ಸಲ್ಲದಯ್ಯಾ!
ನಾಯ ಹಾಲು ನಾಯಿಗಲ್ಲದೆ ಪಂಚಾಮೃತಕ್ಕೆ ಸಲ್ಲದಯ್ಯಾ!
ನಮ್ಮ ಕೂಡಲಸಂಗನ ಶರಣರಿಗಲ್ಲದೆ
ಮಾಡುವ ಅರ್ಥವ್ಯರ್ಥ ಕಂಡಯ್ಯಾ.

ಹನ್ನೆರಡನೆಯ ಶತಮಾನದ ಸಂದರ್ಭದಲ್ಲಿ ಅಸ್ತಿತ್ವದಲ್ಲಿದ್ದ ಜೈನ, ಬೌದ್ಧ, ವೈದಿಕ ಧರ್ಮಗಳ ಮತ ಪ್ರಚಾರಕ್ಕೆ ಕಟ್ಟುಬಿದ್ದು ಕೆಲವರು ಮತಾಂತರ ಹೊಂದತ್ತಿದ್ದುದನ್ನು ಕಂಡು ಬಾಳಿಗೆ ಹೇಗೆ ಒಂದೇ ಗೊನೆಯೋ ಹಾಗೆ ಬಾಳುವವನು ಒಂದು ಧ್ಯೇಯ, ಧರ್ಮಕ್ಕೆ ಇದ್ದಿರಬೇಕೆಂಬುದನ್ನು ಈ ವಚನವು ಸ್ಪಷ್ಟಪಡಿಸುತ್ತದೆ.[೧]

ಭಕ್ತರ ಕಂಡಡೆ ಬೋಳರಪ್ಪರಯ್ಯಾ;
ಸವಣರ ಕಂಡಡೆ ಬತ್ತಲೆಯಪ್ಪಿರಯ್ಯಾ;
ಹಾರುವರ ಕಂಡಡೆ ಹರಿನಾಮವೆಂಬಿರಯ್ಯಾ
ಅವರವರ ಕಂಡಡೆ ಅವರವರಂತೆ
ಸೂಳೆಗೆ ಹುಟ್ಟಿದವರ ಎನಗೆ ತೋರದಿರಯ್ಯಾ
ಕೂಡಲ ಸಂಗಮದೇವರ ಪೂಜಿಸಿ, ಅನ್ಯದೈವದಿಗಳಿಗೆರಗಿ
ಭಕ್ತರೆನಿಸಿಕೊಂಬ ಅಜ್ಞಾನಿಗಳ ನಾನೇನೆಂಬನಯ್ಯಾ!

ಧಾರ್ಮಿಕ ಆಚರಣೆಗಳನ್ನು ಖಂಡಿಸಿದ ಬಸವಣ್ಣನವರು ಜನಸಾಮಾನ್ಯರಲ್ಲಿದ್ದ, ಅನೀತಿ ಅಪನಂಬಿಕೆಗಳನ್ನು ಟೀಕಿಸಿದರು. ಮನೆಯ ಬಾಗಿಲಿಗೆ ಬಂದವರಿಗೆ ಅನ್ನ ಹಾಕದೇ ದೇವರಿಗೆ ನೈವೇದ್ಯವನ್ನಿಡುವ, ಹೊಟ್ಟೆಗೆ ಅನ್ನವಿಲ್ಲದೆ ಗೋಳಾಡುವ ಅಂಗವಿಕಲರಿಗೆ ಕಾಸುಹಾಕದೆ ಅರ್ಚಕ ಹಿಡಿದುತಂದ ಮಂಗಳಾರತಿ ತಟ್ಟೆಗೆ ಕಾಸುಹಾಕುವ ಆ ಮೂಲಕ ತಮಗೆ ದೈವ ಕೃಪೆ ಒದಗಿತೆಂದು ಸಂತೃಪ್ತಿಗೊಳ್ಳುವ ಜನರ

೧. ಬಸವಪುರುಷ, ಸಂ. ಹಾ.ಮಾ.ನಾಯಕ, ಪುಟ ೧೫೮.

ಕುರಿತು ನಂಬಿಕೆಯನ್ನು ಖಂಡಿಸಿ, ವಿಪರ್ಯಾಸ ಪ್ರವೃತ್ತಿಯನ್ನು ಗೇಲಿಮಾಡಿ ನೈಜ ದಾರಿಯತ್ತ ಅವರ ಗಮನ ಸೆಳೆದಿದ್ದಾರೆ.

ಕಲ್ಲನಾಗರ ಕಂಡಡೆ ಹಾಲ ನೆರೆಯೆಂಬರು;
ದಿಟದನಾಗರ ಕಂಡಡೆ ಕೊಲ್ಲೆಂಬರಯ್ಯಾ!
ಉಂಬ ಜಂಗಮ ಒಂದಡೆ ನಡೆಯೆಂಬರು;
ಉಣದ ಲಿಂಗಕ್ಕೆ ಬೋನವ ಹಿಡಿಯೆಂಬರಯ್ಯಾ!
ನಮ್ಮ ಕೂಡಲಸಂಗನ ಶರಣರ ಕಂಡು ಉದಾಸೀನವ ಮಾಡಿದಡೆ
ಕಲ್ಲತಾಗಿದ ಮಿಟ್ಟೆಯಂತಪ್ಪರಯ್ಯಾ.

ಜಂಗಮ ಸೇವೆಗಿಂತ ಲಿಂಗ ಸೇವೆಯೇ ಮೋಕ್ಷದಾಯಕವೆಂದು ನಂಬಿ ನಡೆಯುತ್ತಿದ್ದ ಜನಗಳಿಗೆ, ವಾಸ್ತವ ಜೀವನದ ಅರಿವು ಮಾಡಿಕೊಡಲು ಬಸವಣ್ಣನವರು ಪ್ರಯತ್ನಿಸಿದರು.

ಮರಕ್ಕೆ ಬೇರು ಬಾಯಿಯೆಂದು ತಳಯಿಂಕೆ ನೀರನೆರೆದಡೆ
ಮೇಲೆ ಪಲ್ಲವಿಸಿತ್ತು ನೋಡಾ
ಲಿಂಗದ ಬಾಯಿ ಜಂಗಮವೆಂದು ಪಡಿಪದಾರ್ಥವ ನೀಡಿದಡೆ
ಮುಂದೆ ಸಕಲಾಧವನೀವನು
ಆ ಜಂಗಮನ ಹರನೆಂದು ಕಂಡು, ನರನೆಂದು ಭಾವಿಸಿದಡೆ
ನರಕ ತಪ್ಪದು, ಕಾಣಾ ಕೂಡಲಸಂಗಮದೇವಾ.

ಮರದ ಎಲೆಗೆ ನೀರು ಬಿಟ್ಟರೆ ಅದು ಚಿಗುರುವುದಿಲ್ಲ; ಬೇರಿಗೆ ನೀರು ಹೊಯ್ದರೆ ಮೇಲೆ ಪಲ್ಲವಿಸುತ್ತದೆ, ಹಾಗೆಯೇ ಜಂಗಮನಿಗೆ ಬಡಿಸಿದರೆ ಲಿಂಗಕ್ಕೆ ತಲುಪಿ ಸಮಾಧಾನಗೊಳ್ಳುತ್ತದೆ. 'ಜನಸೇವೆಯೇ ಜನಾರ್ಧನನ ಸೇವೆ' 'ದೇಶ ಸೇವೆಯೇ ಈಶ ಸೇವೆ' ಎಂಬ ಈ ಯುಗದ ಘೋಷಣೆಗಳಿಗೆ ಬಸವಣ್ಣನವರ ಮಾತು ಮುಂಜಾವಿನ ಕೋಳಿ ಕೂಗಿದಂತಿದೆ.[೧]

ಅಂದಿನ ಸಮಾಜದಲ್ಲಿ ಕೆಲವು ಜನರು ಈ ಲೋಕದಲ್ಲಿ ಏನೇ ಮಾಡಿದರೂ ಚಿಂತೆಯಿಲ್ಲ, ಬಡವರ ತಲೆಹೊಡೆದು ಹಣಸಂಪಾದಿಸಿದರೂ ಮುಪ್ಪಿನ ಸಮಯದಲ್ಲಿ ಪುರಾಣ ಪುಣ್ಯಕಥೆಗಳನ್ನು ಕೇಳಿದರೆ, ಕೆರೆ-ಕುಂಟೆ ಕಟ್ಟಲು ಹಣಸಹಾಯ ಮಾಡಿದರೆ, ಪರಪೀಡನ ಮಾಡಿದ್ದರೂ ಕರಾತಾಡನ ಮಾಡುವ ಸಭೆಗಳಲ್ಲಿ ಭಾಗವಹಿಸಿದರೆ

---

೧. ಬಸವಪುರುಷ, ಸಂ. ಹಾ.ಮಾ.ನಾಯಕ, ಪುಟ ೧೫೭.

ಸನ್ಮಾರ್ಗಿಗಳೆಂದೂ– ಪರಲೋಕದಲ್ಲಿ ಸದ್ಗತಿಗೆ ಸಂಚಾಕಾರವನ್ನು ಕೊಟ್ಟಂತೆ ಆಯಿತೆಂದೂ, ನಂಬಿಕೊಂಡು ಅನ್ಯಾಯ ಮಾಡುತ್ತಿದ್ದಿರಬಹುದು. ಇಂಥ ವಿಪರ್ಯಾಸವನ್ನು ಕಂಡ ಬಸವಣ್ಣನವರು ಅದರ ಪೊರೆ ಬೆಳೆದ ಕಣ್ಣಿಗೆ ನೇತ್ರ ಚಿಕಿತ್ಸೆ ಮಾಡಿದರು.

ಮರ್ತ್ಯ ಲೋಕವೆಂಬುದು ಕರ್ತಾರನ ಕಮ್ಮಟವಯ್ಯ
ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯಾ
ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯ

ಒಮ್ಮೆ ತಮ್ಮ ನಡೆ–ನುಡಿಗಳಿಂದ ಈ ಲೋಕದಲ್ಲಿ ಗಳಿಸಿದ್ದೇ ಪರಲೋಕದಲ್ಲಿ ಸಿಕ್ಕುವುದು – ಎಂಬ ಬತ್ತಲೆ ದಿಟವನ್ನು ಕತ್ತಲಿನಲ್ಲಿ ತಡಕಾಡುವ ಡಾಂಭಿಕ ಜನಕ್ಕೆ ಹೇಳ ಅನ್ಯಲೋಕದ ಚಿಂತೆಬಿಟ್ಟು ಈ ಲೋಕದಲ್ಲಿ ಸರಿಯಾಗಿ ಬಾಳುವ ದೀಕ್ಷೆಕೊಡುತ್ತಾರೆ.

ದೇವಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿರೊ!
ಸತ್ಯವ ನುಡಿವುದೆ ದೇವಲೋಕ, ಮಿಥ್ಯವ ನುಡಿವುದೆ ಮರ್ತ್ಯಲೋಕ
ಆಚರವೇ ಸ್ವರ್ಗ, ಅನಾಚರವೇ ನರಕ
ಕೂಡಲ ಸಂಗಮದೇವಾ ನೀವೆ ಪ್ರಮಾಣು
ಪುಣ್ಯ ಪಾಪಂಗಳೆಂಬವು ತಮ್ಮ ಇಷ್ಟ ಕಂಡಿರೆ
'ಅಯ್ಯಾ' ಎಂದಡೆ ಸ್ವರ್ಗ, 'ಎಲವೋ' ಎಂದಡೆ ನರಕ
ದೇವಾ, ಭಕ್ತಾ, ಜಯಾ, ಜೀಯಾ ಎಂಬ ನುಡಿಯೊಳಗೆ
ಕೈಲಾಸವೈದೂದೆ ಕೂಡಲ ಸಂಗಮದೇವಾ.

ಸ್ವರ್ಗನರಕಗಳಂತೆ ಪುಣ್ಯಪಾಪಗಳೆಂಬವೂ ಕೂಡ ಇಲ್ಲಿಯೇ ಇವೆ. ನಮ್ಮ ನಡೆನುಡಿಯನ್ನು ಅವಲಂಬಿಸಿವೆ. 'ಅಯ್ಯಾ ಎಂದಡೆ ಸ್ವರ್ಗ, ಎಲವೋ ಎಂದಡೆ ನರಕ. ವಿನಯದಿಂದ ಬಾಗಿ ಮೃದುವಚನದಿಂದ ಸತ್ಪುರುಷರನ್ನು ಸತ್ಕರಿಸುವುದೇ ದೈವಿಕವಾದ ವರ್ತನೆ ದೇವಲೋಕವನ್ನು ನಿರ್ಮಿಸುತ್ತದೆ.

ಸಮಾಜದ ವ್ಯಕ್ತಿಗಳಿಂದ ಕೂಡಿದ್ದು ಸಮಾಜದ ಉದ್ಧಾರವೆಂದರೆ ವ್ಯಕ್ತಿಗಳ ಉದ್ಧಾರ ಪ್ರತಿಯೊಬ್ಬರು ನೆಟ್ಟಗೆ, ನೇರಗೆ ಆದರೆ ಸಮಾಜವೂ ನೆಟ್ಟಗೆ, ನೇರಗೆ ಆದಂತೆ ಅವರವರ ಮನೆಯ ದೀಪವನ್ನು ಅವರವರೇ ಹಚ್ಚಿಕೊಂಡರೆ ಯಾರೂ ಯಾರ

ಮನೆಯ ದೀಪವನ್ನು ಹಚ್ಚಬೇಕಾಗಿಲ್ಲ. ಅವರ ಮನೆಯ ಕತ್ತಲೆಯ ಗಣಿಯನ್ನಾಗಿ ಮಾಡಿಕೊಳ್ಳದಿರುವ ಬಗ್ಗೆ ಎಚ್ಚರವನ್ನು ಈ ವಚನದಲ್ಲಿ ಕಾಣಬಹುದು.

ಲೋಕದ ಡೊಂಕ ನೀವೇಕೆ ತಿದ್ದುವಿರಿ?
ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ
ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ
ನೆರೆಮನೆಯ ದುಃಖಕ್ಕೆ ಅಳುವರ ಮೆಚ್ಚ
ಕೂಡಲಸಂಗಮದೇವ!
ಪರರ ಚಿಂತೆ ನಮಗೇಕಯ್ಯಾ? ನಮ್ಮ ಚಿಂತೆ ನಮಗೆ ಸಾಲದೆ
ಕೂಡಲ ಸಂಗಯ್ಯಾ ಒಲಿದಾನೋ ಒಲ್ಲನೋ ಎಂಬ ಚಿಂತೆ
ಹಾಸಲುಂಟು, ಹೊದೆಯಲುಂಟು.

ಚಿಂತೆ ಮನಸ್ಸಿನಲ್ಲಿ ಹುಟ್ಟುತ್ತದೆ, ಭಾವದಲ್ಲಿ ಬೆಳೆಯುತ್ತದೆ. ಮನಸ್ಸಿನಿಂದ ಭಾವದವರೆಗೂ ಒಂದೇ ಚಿಂತೆ ನನ್ನನ್ನು ವ್ಯಾಪಿಸಿದೆ. ಹಾಸುವುದಕ್ಕೂ ಹೊದೆಯುವುದಕ್ಕೂ ಸಾಕಾಗುವಷ್ಟು ಆ ಚಿಂತೆ ಆವರಿಸಿದೆ ಎಂದು ತಿಳಿಯ ಹೇಳಿದರು. ಅದರಂತೆ ಸಪ್ತಸೂತ್ರಗಳನ್ನು ಹೇಳಿ ಬಹಿರಂಗದ ಮರೆತವನ್ನು ನಿಂದಿಸಿ ಅಂತರಂಗ ಶುದ್ಧಿಯ ಹಿರಿಯಮೌಲ್ಯ ಸಾರಿದರು.

ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ,
ಮುನಿಯ ಬೇಡ, ಅನ್ಯರಿಗೆ ಅಸಹ್ಯಪಡಬೇಡ
ತನ್ನ ಬಣಿಸಬೇಡ, ಇದಿರ ಹಳಿಯಲು ಬೇಡ
ಇದೇ ಅಂತರಂಗ ಶುದ್ಧಿ ಇದೇ ಬಹಿರಂಗ ಶುದ್ಧಿ
ಇದೇ ನಮ್ಮ ಕೂಡಲ ಸಂಗಮದೇವರನೊಲಿಸುವ ಪರಿ.

ಮಾನವನ ಮನಃಶುದ್ಧಿಗೆ ಮೊದಲು ಮನ್ನಣೆ ಕೊಡಬೇಕೆಂದು ಹೇಳಿದ ಬಸವಣ್ಣನವರು ಸ್ವಧರ್ಮಿಯರೆನ್ನದೆ, ಪರಧರ್ಮಿಯರೆನ್ನದೆ ತಪ್ಪಿತಸ್ಥರನ್ನೆಲ್ಲ ತಿದ್ದಿದರು, ನೇರ್ಪುಗೊಳಿಸಿದರು.

ಒಳಗೆ ಕುಟಿಲ, ಹೊರಗೆ ವಿನಯವಾಗಿ ಭಕ್ತರೆನಿಸಿಕೊಂಬವರ
ಬಲ್ಲನೊಲ್ಲಯ್ಯ ಲಿಂಗವು
ಅವರು ಸತ್ವತಕ್ಕೆ ಸಲ್ಲರು ಸಲ್ಲರಯ್ಯ
ಒಳಹೊರಗೊಂದಾಗದವರಿಗೆ ಅಳಿಯಾಸೆದೋರಿ

ಬೀಸಾಡುವನವರ ಜಗದೀಶ ಕೂಡಲಸಂಗಮದೇವಾ
ಸಾರ! ಸಜ್ಜನರ ಸಂಗವ ಮಾಡುವುದು
ದೂರ! ದುರ್ಜನರ ಸಂಗ ಬೇಡದಯ್ಯಾ!
ಆವ ಹಾವಾದರೇನು? ವಿಷವೊಂದೇ
ಅಂತವರ ಸಂಗ ಬೇಡಯ್ಯಾ
ಅಂತವರ ಸಂಗ ಬೇಡಯ್ಯಾ
ಅಂತರಂಗ ಶುದ್ಧವಿಲ್ಲವರ ಸಂಗವು
ಸಿಂಗಿ, ಕಾಳಕೂಟ ವಿಷವೋ, ಕೂಡಲ ಸಂಗಯ್ಯಾ.

ಸಜ್ಜನರ ಸಂಗ ಸಾರವತ್ತಾದದ್ದು ಪರಿಣಾಮಕಾರಿಯಾದದ್ದು ಅಪೇಕ್ಷಣೀಯ-ವಾದದ್ದು. ಹಾಗೆ ದುರ್ಜನರ ಸಂಗ ದೂರ ಇರಬೇಕಾದುದು, ಒಂದು ಸಾರ! ಇನ್ನೊಂದು ದೂರ! ಎಂಬ ಮಾತನ್ನು ಪರಿಣಾಮಕಾರಿಯಾಗಿ ಬಳಸಿದ್ದಾರೆ.

ಎಂತಹ ಪಾಪಿಗೂ ಉದ್ಧಾರವಿದೆ ಎಂಬ ಆತ್ಮವಿಶ್ವಾಸವನ್ನು ಬಸವಣ್ಣನವರು ಬೆಳೆಸುತ್ತಿದ್ದಾರೆ. ಧರ್ಮ ಅನೇಕ ವೇಳೆ ಜನಸಾಮಾನ್ಯರಲ್ಲಿ ಕೀಳರಿಮೆಯನ್ನು ಬೆಳೆಸುವ ಒಂದು ಸಾಧನವಾಗಿತ್ತು. ಬಸವಣ್ಣನವರು ಅದರ ಮೂಲೋತ್ಪಾದನೆ ಮಾಡಲು ಪ್ರಯತ್ನಿಸಿದರು. ಸಮಾಜದ ಕುಂದುಕೊರತೆಗಳನ್ನು ಸುಳ್ಳುವಂಚನೆಗಳನ್ನು ಢಾಂಬಿಕತೆ-ಯನ್ನು ಆಶುಕವಿತೆಯಂತಿರುವ ಈ ವಚನ ವಿಡಂಬಿಸುತ್ತದೆ.

ಎಲವೊ, ಎಲವೋ ಪಾಪಕರ್ಮವ ಮಾಡಿದವನೇ
ಎಲವೊ, ಎಲವೋ ಬ್ರಹ್ಮಹತ್ಯವ ಮಾಡಿದವನೇ
ಒಮ್ಮೆ 'ಶರಣೆ'ನ್ನೆಲವೋ!
ಒಮ್ಮೆ 'ಶರಣೆಂದಡೆ ಪಾಪಕರ್ಮವ ಓಡುವವು'
ಸರ್ವಪ್ರಾಯಶ್ಚಿತ್ರಕ್ಕೆ ಹೊನ್ನ ಪರ್ವತಂಗಳೈವವು
ಒಬ್ಬಗೆ ಶರಣೆನ್ನು, ನಮ್ಮ ಕೂಡಲಸಂಗದೇವಂಗೆ!

ಬಸವಣ್ಣನವರು ಸಮಾಜದಲ್ಲಿ ಭ್ರಾತೃತ್ವ ಭಾವನೆಯಿರಬೇಕೆಂದು ಆಶಿಸಿದವರು ಅನ್ಯೋನ್ಯತೆ, ಸಹಕಾರ, ಸಮಾಜದ ಅಡಿಗಲ್ಲು ಎಂಬುದರ ಅರಿವು ಬಸವಣ್ಣನವರಿಗೆ ಇತ್ತು. ಆದರೆ ಸಮಾಜದಲ್ಲಿ ಕಂಡುಬರುವ ಅಸಹಕಾರ, ವೈಷಮ್ಯ, ಸ್ವಾರ್ಥ ಮುಂತಾದ ಗುಣಗಳನ್ನು ಕಂಡು ಮನುಷ್ಯರಿಗಿಂತ ಪಶು-ಪಕ್ಷಿಗಳಷ್ಟೇ ಈ ನಿಟ್ಟಿನಲ್ಲಿ ಬಹುಪಾಲು ವಾಸಿಯೆನಿಸಿರಬೇಕು.

ಕಾಗೆ ಒಂದಗುಳ ಕಂಡಡೆ ಕರೆಯದೆ ತನ್ನ ಬಳಗವನು?
ಕೋಳಿ ಒಂದು ಕುಟುಕ ಕಂಡಡೆ ಕೂಗಿ ಕರೆಯದೆ ತನ್ನ ಕುಲವನ್ನೆಲ್ಲವ?
ಶಿವಭಕ್ತನಾಗಿ ಭಕ್ತಿ ಪಕ್ಷವಿಲ್ಲದಿದ್ದಡೆ ಕಾಗೆ ಕೋಳಿಯಿಂದ ಕರಕಷ್ಟ
ಕೂಡಲಸಂಗಮದೇವಾ.

ಮನುಷ್ಯ ತಾನು ಪಡೆದುದನ್ನು ಹಂಚಿಕೊಂಡು ತಿನ್ನಬೇಕೆಂಬುದನ್ನು ಹೇಳುತ್ತಿದ್ದಾರೆ. ನಿತ್ಯ ಕಾಣುತ್ತಿರುವ ಎರಡು ಪ್ರಾಣಿಗಳ ಉದಾಹರಣೆಯಿಂದ ಅದನ್ನು ಮನದಟ್ಟು ಮಾಡಿಕೊಡುತ್ತಾರೆ. 'ಎಲ್ಲವೂ ಎಲ್ಲರಿಗಾಗಿ, ಎಲ್ಲರಿಂದ' ಎಂದು ಇಂದಿನ ಸರ್ವೋದಯ ಸಮಾಜದ ಬೀಜ ಮಂತ್ರ ಬಸವಣ್ಣನವರು ಹೇಳಿದ್ದಾರೆ.

ಬಸವಣ್ಣನವರು ಧರ್ಮ ಯಾವುದು? ಎಂದು ವಿವರಿಸಿದ ಬಗ್ಗೆ ಅತ್ಯುತ್ತಮ-ವಾದುದು

ದಯವಿಲ್ಲದ ಧರ್ಮವದೇವುದಯ್ಯಾ
ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿಯು
ದಯವೇ ಧರ್ಮದ ಮೂಲವಯ್ಯ
ಕೂಡಲಸಂಗಯ್ಯನಂತಲ್ಲದೊಲ್ಲನಯ್ಯಾ.

ಈ ಬಗೆಯ ಮಾತುಗಳು ಜನತೆಯ ಚಿತ್ತವನ್ನು ತಟ್ಟಿದುವು, ಮುಟ್ಟಿದುವು ಬಸವಣ್ಣನವರು ನಿರ್ದಾಕ್ಷಿಣ್ಯವಾಗಿ ನಿಷ್ಠುರವಾಗಿ ನುಡಿದರೂ ಅವರು ದಯೆಯ ದ್ಯೋತಕವಾಗಿದ್ದರು ನಯ-ವಿನಯಗಳ ಸಾಕಾರ ರೂಪಿಯಾಗಿದ್ದರು. ಇವು ಇತರರಲ್ಲೂ ಇರಬೇಕೆಂದು ಬಯಸಿದ ವ್ಯಕ್ತಿ ಬಸವಣ್ಣನವರು

ಕಂಡ ಭಕ್ತರಿಗೆ ಕೈಮುಗಿವಾತನೆ ಭಕ್ತ
ಮೃದು ವಚನವೆ ಸಕಲ ಜಪಂಗಳಯ್ಯಾ
ಮೃದು ವಚನವೇ ಸಕಲ ತಪಂಗಳಯ್ಯ
ಸದುವಿನಯವೆ ಸದಾಶಿವನ ಒಲುಮೆಯಯ್ಯಾ
ಕೂಡಲಸಂಗಯ್ಯನಂತಲ್ಲದೊಲ್ಲನಯ್ಯಾ.

ಏನಿ ಬಂದಿರಿ, ಹದುಳದಿದ್ದರೆ ಎಂದಡೆ
ನಿಮ್ಮ ಮೈಸಿರಿ ಹಾರಿ ಹೋಹುದೆ?
ಕುಳ್ಳಿರೆಂದಡೆ ನೆಲಕುಳಿಹೋಹುದೆ?
ಒಡನೆ ನುಡಿದಡೆ ಸಿರ ಹೊಟ್ಟೆಯೊಡೆವುದೇ?

ಕೊಡಲಿಲ್ಲದಿದ್ದಕೊಂಡು ಗುಣವಿಲ್ಲದಿದ್ದಡೆ
ಕೆಡಹಿ ಮೂಗ ಕೊಯ್ಯದೆ ಮಾಣ್ಬನೆ ಕೂಡಲಸಂಗಮದೇವಾ.

ಸಾಮಾಜಿಕ ಕ್ರಾಂತಿಗೆ ಕಾರಣರಾದ ಬಸವಣ್ಣನವರು ಆರ್ಥಿಕ ಚಳವಳಿಗೂ ಕಾರಣರಾದರು. ಹಣವನ್ನು ಮಾಯೆ ಎಂದು ನಿರಾಕರಿಸದೆ, ಹಣ ಪವಿತ್ರವಾದದ್ದು. ಮಾನವನ ಎಲ್ಲ ಚಟುವಟಿಕೆಗಳಿಗೂ ಮೂಲಭೂತವಾದದ್ದು. ಆದರೆ ಅದೇ ಸರ್ವಸ್ವವಲ್ಲ ಕೊನೆಯ ಗುರಿಯಲ್ಲ, ಕೊನೆಯ ಗುರಿಯನ್ನು ಸಾಧಿಸುವ ನಿಮಿತ್ತ ಸಾಧನ. ಇದನ್ನು ತಿರಸ್ಕರಿಸುವಂತಿಲ್ಲ ಪವಿತ್ರಸಾಧನವಾಗಿ ಪರಿವರ್ತಿಸಿಕೊಳ್ಳಬೇಕು ಎಂಬುದು ಅವರ ದೃಷ್ಟಿ ನಿಜವಾಗಿ ನೋಡಿದರೆ ಎಲ್ಲ ಸಾಮಾಜಿಕ ವ್ಯವಸ್ಥೆಯ ಅಡಿಗಲ್ಲು. ಅರ್ಥವ್ಯವಸ್ಥೆ, ಒಂದಲ್ಲಾ ಒಂದು ರೂಪದಲ್ಲಿ ಅದರ ಪ್ರಭಾವ ಸಾಮಾಜಿಕ ಏರುಪೇರುಗಳನ್ನು ನಿರ್ಣಯಿಸುತ್ತದೆ. ಆರ್ಥಿಕ ಶೋಷಣೆಯೇ ಎಲ್ಲ ಸಾಮಾಜಿಕ ಶೋಷಣೆಗಳ ಮೂಲ. ಇದನ್ನು ಗ್ರಹಿಸಿದ ಬಸವಣ್ಣನವರು ವರ್ಣವ್ಯವಸ್ಥೆಯ ವಿರೋಧದ ಜೊತೆಯಲ್ಲಿಯೇ ಅರ್ಥವ್ಯವಸ್ಥೆಯ ವಿಧಾಯಕ ಕಾರ್ಯವನ್ನು ಬೆಳೆಸಿಕೊಂಡು ಬಂದರು. ಸ್ವಯಂಪೂರ್ಣ ಸಮಾಜದ ಸುವ್ಯವಸ್ಥೆ ಅವರ ಆದರ್ಶವಾಗಿತ್ತು. ಸಮಾಜದಲ್ಲಿ ಎಲ್ಲರ, ಎಲ್ಲ ರೀತಿಯ ವಿಕಾಸಕ್ಕೂ ಈ ಸಾಮಾಜಿಕ ವ್ಯವಸ್ಥೆ ಕಾರಣವಾಗಬೇಕು. ವ್ಯಷ್ಟಿಯ ಉದ್ಧಾರ, ಸಮಷ್ಟಿಯ ಹಿತಕ್ಕೆ ವಿರೋಧವಾಗ-ಬಾರದು. ಉತ್ತಮರ ಸೌಲಭ್ಯಗಳು ದಲಿತರ ಶೋಷಣೆಗೆ ಕಾರಣವಾಗಬಾರದು ಎನ್ನುವ ಆಶಯ ಬಸವಣ್ಣನವರದು.

ಸಮಾಜದಲ್ಲಿ ದೀನರು, ದುಃಖಿಗಳು ತುಳಿತಕ್ಕೆ ಒಳಗಾಗಿರುವುದನ್ನು ಕಂಡು ಅವರ ಮನಸ್ಸು ಮಿಡಿದಂತೆಯೇ ಉತ್ತಮರ ಅಜ್ಞಾನವನ್ನು ಅಹಂಕಾರವನ್ನು ಕಂಡು ಅವರು ಮರುಗುತ್ತಾರೆ. ಸಿರಿವಂತಿಕೆಯ ಅಮಲಿನಲ್ಲಿರುವವರನ್ನು ಕಂಡು ಒಂದು ಕಡೆ ಅವರು ಹೀಗೆ

ಹಾವು ತಿಂದವರ ನುಡಿಸಬಹುದು.
ಗರ ಹೊಡೆದವರ ನುಡಿಸಬಹುದು
ಸಿರಿಗರ ಹೊಡೆದವರ ನುಡಿಸಲು ಬಾರದಯ್ಯ!
ಬಡತನವೆಂಬ ಮಂತ್ರವಾದಿಹುಗಲು
ಒಡನೆ ನುಡಿದರು ಕೂಡಲಸಂಗಮದೇವಾ.

ಹೀಗೆ ಸಿರಿಗರ ಹೊಡೆದವರ ಒಂದು ರೀತಿಯಾದರೆ ವಿನಯಕ್ಕೆ ಕಾರಣ-ವಾಗಬೇಕಾದ ವಿದ್ಯೆಯ ಗರ್ವಗ್ರಹವೂ ಇನ್ನೊಂದು ರೀತಿಯ ಪೀಡೆಯಾಗಬಹುದು. ವಿಚಾರವಿಲ್ಲದ ಆಡಂಬರ ಅಹಂಕಾರಗಳಿಗೆ ಕಾರಣವಾಗಬಹುದು. ಅಂತಹವರನ್ನು ಕುರಿತು ಬಸವಣ್ಣ

ವೇದವನೋದಿದ ವಿಪ್ರರು ಹೊನಲಲ್ಲಿ ಹೋದ ಕೇಡ ನೋಡಿರೇ!
'ಭರ್ಗೋ ದೇವಸ್ಯ ಧೀಮಹಿ' ಎಂಬರು
ಒಬ್ಬರಿಗಾಗಿ ವಿಚಾರವಿಲ್ಲ ನೋಡಿರೇ
ಕೂಡಲ ಸಂಗಮದೇವಾ.

ಎಂದು ಅವರ ಅಜ್ಞಾನಕ್ಕೂ ಅಂಧಶ್ರದ್ಧೆಗೂ ಅನುಕಂಪಪಡುತ್ತಾರೆ. ಸರ್ವರ ಉದ್ಧಾರಕ್ಕೆ ಕಾರಣವಾಗುವ ಸರ್ವೋದಯ ಮಾರ್ಗವೊಂದನ್ನು ಅವರು ಆವಿಷ್ಕರಿಸಿದರು. ಅದೇ ಕಾಯಕದ ಪರಿಕಲ್ಪನೆ ಸತ್ಯಾಗ್ರಹ, ಸರ್ವೋದಯ – ಇವು ಗಾಂಧೀಜಿಯವರ ಕೊಡುಗೆಯಾದರೆ ಕಾಯಕ ಮತ್ತು ದಾಸೋಹ – ಇವು ಬಸವಣ್ಣನವರ ಜೀವನ ಸಾಧನೆಯ ಎರಡು ಕಣ್ಣುಗಳು.[೧]

ಬಸವಣ್ಣನವರ ಸಾಮಾಜಿಕ ಮತ್ತು ಆರ್ಥಿಕ ಸಿದ್ಧಾಂತಕ್ಕೆ ಕಾಯಕ ಅಡಿಗಲ್ಲಾಯಿತು. ಅದು ಸಿದ್ಧಾಂತವಾಗಿ ಮಾತ್ರ ಉಳಿಯದೇ ಸಾವಿರಾರು ಜನರ ಆಚರಣೆಯ ಆಂದೋಲನವಾಯಿತು. ಶರಣರ ಸಾಮಾಜಿಕ ತತ್ವಕ್ಕೆ ಪೂರ್ಣಜೀವನದ ದಾರ್ಶನಿಕತೆಯನ್ನು ಇದು ತಂದುಕೊಟ್ಟಿತು. ಇಂದಿನ ಅತ್ಯಂತ ಆಧುನಿಕ ದೃಷ್ಟಿಗೂ ಆಧುನಿಕವಾಗಿ ಸಾರ್ವಕಾಲಿಕವಾದ ಸತ್ವ ಈ ಕಾಯಕದ ಕಲ್ಪನೆಯಲ್ಲಿದೆ. ಪ್ರತಿಯೊಬ್ಬ ವ್ಯಕ್ತಿಯೂ ಒಂದಲ್ಲ ಒಂದು ಕೆಲಸವನ್ನು ಮಾಡುತ್ತಲೇ ಇರಬೇಕು. ಕೆಲಸವನ್ನು ಮಾಡುವವನಿಗೆ ಇನ್ನೊಬ್ಬನ ದುಡಿಮೆಯನ್ನು ಕುಳಿತು ತಿನ್ನುವ ಅಧಿಕಾರವಿಲ್ಲ. ಯಾವುದೇ ಉದ್ಯೋಗವನ್ನು ಕೈಗೊಂಡಿದ್ದರೂ ಅದು ವ್ಯಕ್ತಿಯ ಸರ್ವಾಂಗೀಣ ವಿಕಾಸಕ್ಕೆ ಅಡ್ಡಿಯಾಗಬಾರದು. ಉದ್ಯೋಗದಲ್ಲಿ ಮೇಲು-ಕೀಳುಗಳಿಲ್ಲ, ಅದನ್ನು ನಿರ್ವಹಿಸುವ ಮನೋಧರ್ಮದಲ್ಲಿದೆ. ಹಾಗೆ ನಿರ್ವಹಿಸಿದಾಗ ಮಾತ್ರ ಉದ್ಯೋಗ ಕಾಯಕವಾಗುತ್ತದೆ. ಹೀಗೆ ಕಾಯಕದಿಂದ ಪಡೆದ ಫಲವನ್ನು ಸಮಾಜಕ್ಕೂ ಅರ್ಪಿಸಬೇಕು. ಇದೇ ದಾಸೋಹ. ಸಮಾಜ ಸ್ವಯಂಪೂರ್ಣವಾಗಬೇಕಾದರೆ, ಸುಖಮಯವಾಗಬೇಕಾದರೆ

೧. ವಚನ ಚಳುವಳಿ, ಡಾ. ಹೆಚ್.ತಿಪ್ಪೇರುದ್ರಸ್ವಾಮಿ, ಶ್ರೀ ಶರಣ ಬಸವೇಶ್ವರ ಗ್ರಂಥಾಲಯ, ವಿಶ್ವವಿದ್ಯಾನಿಲಯ, ಗುಲಬರ್ಗಾ, ೧೯೮೭, ಪುಟ ೨೮.

ಎಲ್ಲರೂ ಉದ್ಯೋಗಗಳಲ್ಲಿ ನಿರತರಾಗಲೇಬೇಕು. ಭಿಕ್ಷೆ ಬೇಡುವುದನ್ನು ಅವರು ಕಟುವಾಗಿ ಖಂಡಿಸಿದರು. ಇನ್ನೊಬ್ಬರ ಹಂಗಿನಲ್ಲಿ ಬಾಳುವ ಜೀವನ ಜೀವನವೇ ಅಲ್ಲ. ಅನ್ಯರ ಮನೆಗೆ ಹೋಗಿ "ತನ್ನುದರವ ಹೊರೆಯದ ಅಚ್ಚ ಶರಣರ ಕಂಡರೆ ನಿಶ್ಚಲವಾಗಿ ಕೂಡಲಸಂಗಯ್ಯನೆಂಬೆ" ಎನ್ನುವರು ಬಸವಣ್ಣ – ಉದ್ಯೋಗಗಳನ್ನು ನೋಡುವ ಸಾಮಾಜಿಕ ದೃಷ್ಟಿಯೇ ಬದಲಾಯಿತು. ದುಡಿಮೆಯ ಸಾಮಾಜಿಕ ಮೌಲ್ಯ ಹೆಚ್ಚಾಯಿತು. ದುಡಿಮೆ ಅನಿವಾರ್ಯವೆಂಬುದರ ಜೊತೆಗೆ ಅಷ್ಟೇ ನ್ಯಾಯಮಾರ್ಗ-ದಲ್ಲಿರಬೇಕು ಎಂಬುದಕ್ಕೂ ಒತ್ತುಕೊಟ್ಟಿತು. ಸಮಾಜದ ಹಿತಕ್ಕೆ ಅಗತ್ಯವಾದ ಉದ್ಯೋಗ ಯಾವುದೇ ಆಗಲಿ ಅದು ಸತ್ಯಶುದ್ಧವಾಗಿದ್ದರೆ ಶ್ರೇಷ್ಠವಾದುದಾಗುತ್ತವೆ. ಅದಕ್ಕೆ ಬದಲಾಗಿ ಅಸತ್ಯ ಅಧರ್ಮಗಳಿಂದ ಮಾಡುವ ದುಡಿಮೆ, ಪಾಪದ ಹಣ, ತಾನು ಕೈಗೊಂಡ ಉದ್ಯೋಗ ಸಮಾಜಕ್ಕೆ ಹಾನಿಕರವಾಗದೆ ಸಮಾಜದ ಆವಶ್ಯಕತೆಗಳನ್ನು ಪೂರೈಸುವಂತಿರಬೇಕು.

ಬಸವಣ್ಣನವರು ಬ್ರಾಹ್ಮಣ್ಯವನ್ನು ನಿರಾಕರಿಸಿದರೂ ಅವರು ಅಂದಿನ ರಾಜಶಾಹಿಯೊಂದಿಗೆ ಹೊಂದಿಕೊಂಡು ಬದುಕಬೇಕಾಗಿ ಬಂದದ್ದರಿಂದ ಬೇರೆ ಬಗೆಯ ಬಿಕ್ಕಟ್ಟುಗಳನ್ನು ಎದುರಿಸಬೇಕಾಯಿತು. ಅಂದಿನ ಆಂದೋಲನಕ್ಕೆ ಅದರ ಸಂಘಟನೆಗೆ ಮತ್ತು ಅದರ ನಿರ್ವಹಣೆಗೆ ಸಾಕಷ್ಟು ಜನಬಲ ಮತ್ತು ಧನಬಲ ಅಗತ್ಯವಾಗಿದ್ದು ಬಸವಣ್ಣನವರ ಅಧಿಕಾರದಿಂದಲೂ ನೆರವು ದೊರೆತಿರಬೇಕು. ಅವರು ರಾಜನೊಂದಿಗೆ ರಾಜತ್ವದೊಂದಿಗೆ ತಮಗೆ ಇರುವ ಸಂಬಂಧಗಳನ್ನು ತಮ್ಮ ನಿಲುವುಗಳನ್ನು ಅತ್ಯಂತ ಸ್ಪಷ್ಟವಾಗಿ ಬಿಚ್ಚಿಡುತ್ತಾ ತಮ್ಮ ಸುತ್ತಣ ಜನ ಆಗಾಗ ಸಂಶಯಪಟ್ಟರೂ ಒಟ್ಟಾರೆಯಾಗಿ ತಮ್ಮನ್ನು 'ಇವನಾರವ ಇವನಾರವ' ಎಂದುಕೊಳ್ಳದೆ 'ಇವ ನಮ್ಮವ ಇವ ನಮ್ಮವ'ನೆಂದು ಒಪ್ಪಿಕೊಳ್ಳುವಂತೆ ನಡೆದುಕೊಂಡರು.

ಬಸವಣ್ಣನವರು ಮೂಲತಃ ಅನುಭಾವಿಕ ನಿಲುವಿನ ವ್ಯಕ್ತಿಯಾದ್ದರಿಂದ ಅವರ ಪಾಲಿಗೆ ಅಧಿಕಾರ ಇತ್ಯಾದಿಗಳ ಬಗ್ಗೆ ಅಂತಹ ಭ್ರಮೆಗಳೇನೂ ಇರಲಿಲ್ಲ. ಲೋಕದ ಬೋಗ-ವೈಭವಗಳ ಬಗೆಗೆ ವಿರಕ್ತನಾಗುವಂತಹ ಚೇತನಕೆ ಇವು ಯಾವುವು ದೊಡ್ಡವೆಂದು ತೋರುವುದಿಲ್ಲ. ಅವರಿಗೆ ಭೋಗ-ವೈಭವಗಳಿಗಿಂತ ಸತ್ಯದ ನಿಲುವನ್ನರಿಯುವುದು ಮುಖ್ಯವಾಗಿತ್ತು.

ಆನೆಯನೇರಿಕೊಂಡು ಹೋದಿರೆ ನೀವು
ಕುದುರೆಯನೇರಿಕೊಂಡು ಹೋದಿರೆ ನೀವು

ಕುಂಕುಮ ಕಸ್ತೂರಿಯ ಪೂಸಿಕೊಂಡು ಹೋದಿರೆ ಅಣ್ಣಾ
ಸತ್ಯದ ನಿಲುವನರಿಯದೆ ಹೋದಿರಲ್ಲಾ......

ಎಂಬ ಮಾತಿನಲ್ಲಿ ಈ ಲೋಕದ ಭೋಗ-ಭಾಗ್ಯಗಳ ಬೆನ್ನು ಹತ್ತಿ ಸತ್ಯದ ನಿಲುವನ್ನರಿಯದೆ ವ್ಯರ್ಥವಾಗಿ ಹೋದ ಪದವಿಗಳ ಮತ್ತು ಅಧಿಕಾರಗಳ ಬಗ್ಗೆ ತಾಳಿದ ಕನಿಕರ ಅಭಿವ್ಯಕ್ತವಾಗಿದೆ.

ಅರಸು ಮುನಿದಡೆ ನಾಡೊಳಗಿರಬಾರದಯ್ಯ
ಗಂಡ ಮುನಿದೊಡೆ ಮನೆಯೊಳಗೆ ಇರಬಾರದಯ್ಯ
ಕೂಡಲಸಂಗಮದೇವಾ
ಜಂಗಮ ಮುನಿದಡೆ ನಾನೆಂತು ಬದುಕುವೆನೆ?

ಈ ಮಾತುಗಳಲ್ಲಿ ರಾಜನ ಆಗ್ರಹಕ್ಕೊಳಗಾದರೆ ಅಂತಹವನಿಗೆ ಉಳಿಗಾಲವೇ ಇಲ್ಲ ಎಂಬ ಕಟುಸತ್ಯವನ್ನು ಅರಿತವರಾಗಿದ್ದರು. ರಾಜ ಕೂಡ ಎಲ್ಲರಂತೆ ಒಬ್ಬ ಸಾಮಾನ್ಯ ಮನುಷ್ಯ. ಅವನಿಗೆ ಬೆಲೆ ಬರುವುದು ಅವನ ರಾಜತ್ವ ಅಥವಾ ರಾಜಪದವಿಯಿಂದ. ಅವನೂ ಮೃತ್ಯುವಿಗೆ ಒಳಗಾಗುವ ಒಬ್ಬ ಮನುಷ್ಯ ಇಂತಹವನು ಸತ್ತರೆ ಉಳಿದವರ ಶವಗಳಿಗೆ ಇವನ ಶವಕ್ಕೂ ಏನೂ ವ್ಯತ್ಯಾಸ?

ವ್ಯಾದನೊಂದು ಮೊಲನ ತಂದಡೆ ಸಲುವ ಹಾಗಕ್ಕೆ
ಬಿಲವರಯ್ಯ,
ನೆಲನಾಳ್ವನ ಹೆಣನೆಂದಡೆ ಒಂದಡಕೆಗೆ ಕೊಂಬರಿಲ್ಲ ನೋಡಯ್ಯಾ
ಮೊಲನಿಂದ ಕರಕಷ್ಟ ನರನ ಬಾಳುವೆ,
ಸಲೆ ನಂಬೊ ನಮ್ಮ ಕೂಡಲ ಸಂಗಮದೇವನ.

ರಾಜನಾದವನ ಶವಕ್ಕೆ ಒಂದು ಸತ್ತ ಮೊಲಕ್ಕಿರುವ ಬೆಲೆಯೂ ಇಲ್ಲ. ಇಂಥ ನಿಕೃಷ್ಟವಾದ ಪದಾರ್ಥ ಅದು. ಎಲ್ಲ ಅನುಭಾವಗಳಂತೆ 'ಮೃತ್ಯುತತ್ತ್ವ'ವನ್ನು ಕೇಂದ್ರದಲ್ಲಿರಿಸಿಕೊಂಡು ಲೋಕದ ಪದವಿ ಐಶ್ವರ್ಯ ಇತ್ಯಾದಿಗಳನ್ನು ಒರೆಗೆ ಹಚ್ಚುವ ಬಸವಣ್ಣನವರಿಗೆ ಅವರು ವಹಿಸಿಕೊಂಡ ಪದವಿ ಕೂಡ ನಿಕೃಷ್ಟವಾದದ್ದೆ. ಅವರು ಬಹಿರಂಗದಲ್ಲಿ ಯಾವನೋ ಒಬ್ಬ ಒಡೆಯನ ಸೇವೆಗೆ ನಿಂತಂತೆ ಕಾಣಿಸಿದರೂ-ಅಂತರಂಗದಲ್ಲಿ ಅವರ ಒಡೆಯರೇ ಬೇರೆ, "ಎನಗೆ ಒಡೆಯರುಂಟು ಕೂಡಲ ಸಂಗನ ಶರಣರು" ಎಂದು ಹೇಳುವುದರ ಮೂಲಕ ಮಾನಿಸವಾಗಿ ತಮ್ಮ ನಿಷ್ಠೆ ಯಾರಿಗೆ ಎಂಬುದನ್ನು ಸ್ಪಷ್ಟವಾಗಿ ಹೇಳಿದ್ದಾರೆ.

ಅರಸನ ಮನೆಯಲ್ಲಿ ಅರಸಿಯಾಗಿಪ್ಪುದರಿಂದ
ಭಕ್ತರ ಮನೆಯ ತೊತ್ತಾಗಿಪ್ಪುದು ಕರಲೇಸಯ್ಯ

ಎಂಬುದನ್ನು ಅವರು ಚೆನ್ನಾಗಿ ಬಲ್ಲರು. ಒಬ್ಬ ಮನುಷ್ಯನಾಗಿ ಬದುಕುವುದಕ್ಕೆ ಯಾವುದಾದರೊಂದು ಉದ್ಯೋಗವನ್ನು ಅವಲಂಬಿಸುವುದು ತಪ್ಪೇನಲ್ಲ. ಆದರೆ ತಮ್ಮ ಈ ವ್ಯವಹಾರ ಮತ್ತು ಪರಸೇವೆ, ಲಿಂಗಾರ್ಚನೆ ಮತ್ತು ಜಂಗಮ ದಾಸೋಹಕ್ಕೆ ಈ ಎರಡೂ ಮೂಲತಃ ಆಧ್ಯಾತ್ಮಿಕವಾದ ಕ್ರಿಯೆಗಳು ಇದು ತಮ್ಮ ಸ್ವಾರ್ಥಕ್ಕಾಗಿ ಅಥವಾ ಕೇವಲ ಉದರ ಪೋಷಣೆಯ ಏಕೈಕ ಉದ್ದೇಶಕ್ಕಾಗಿ ಅಲ್ಲ. ಈ ಅಭಿಪ್ರಾಯವನ್ನು ಇನ್ನಷ್ಟು ಸಮರ್ಥಿಸುತ್ತಾ

ಹೊತ್ತಾರೆ ಎದ್ದು ಕಣ್ಣ ಹೊಸೆಯುತ್ತ
ಎನ್ನ ಒಡಲಿಂಗೆ, ಎನ್ನ ಒಡವೆಗೆಂದು ಎನ್ನ ಮಡದಿ – ಮಕ್ಕಳಿಗೆಂದು
ಕುದಿದೆನಾದಡೆ ಎನ್ನ ಮನಕ್ಕೆ ಮನವೆ ಸಾಕ್ಷಿ
ಹೊಲೆಹೊಲೆಯರ ಮನೆಯ ಹೊಕ್ಕಾದಡೆಯೂ
ಸಲೆ ಕೈಕೂಲಿಯ ಮಾಡಿಯಾದರೆಯೂ
ನಿಮ್ಮ ನಿಲವಿಂಗೆ ಕುದಿವೆನಲ್ಲದೆ ಎನ್ನೊಡಲ ವಸರಕ್ಕೆ
ಕುದಿದೆನಾದಡೆ
ತಲೆದಂಡಕೂಡಲಸಂಗಮದೇವಾ.

ಎಂದು ಉದ್ಘೋಷಿಸುತ್ತಾರೆ. ಈ ಉದ್ಘೋಷ ಅತ್ಯಂತ ಪ್ರಾಮಾಣಿಕವಾದ ಮನುಷ್ಯನೊಬ್ಬನ ಕಳಕಳಿಯನ್ನು ಅತ್ಯಂತ ತೀವ್ರವಾಗಿ ಪ್ರಕಟಿಸುತ್ತದೆ. ದಿನವೂ ಅವರು ನಡೆಸುತ್ತಿದ್ದ ಲಿಂಗಾರ್ಚನೆ ಜಂಗಮ ದಾಸೋಹ ಕಂಡು ಆಗದವರು ಈ ಆರೋಪವನ್ನು ಮಾಡಿರಬೇಕು ಇಂಥ ಮಾತಿಗೆ ಬಸವಣ್ಣನವರು

ಊರ ಮುಂದೆ ಹಾಲ ಹಳ್ಳ ಹರಿವುತ್ತಿರಲು
ಒರೆಯಾವಿನ ಬೆನ್ನ ಹರಿಯಲದೇಕಯ್ಯಾ?
ಲಜ್ಜಗೆಡಲೇಕೆ? ನಾಣುಗೆಡಲೇಕೆ?
ಕೂಡಲಸಂಗಮದೇವನುಳ್ಳನ್ನಕ್ಕ
ಬಿಜ್ಜಳ ಭಂಡಾರವೆನಗೇಕಯ್ಯ

ಎಂದು ಉತ್ತರ ಕೊಟ್ಟಂತೆ ತೋರುತ್ತದೆ.

ಒಟ್ಟಿನಲ್ಲಿ ಸ್ವಾತಂತ್ರ್ಯ, ಸರ್ವಸಮಾನತೆ, ಭ್ರಾತೃತ್ವ ಬಸವಣ್ಣನವರ ಆದರ್ಶ ಸಮಾಜದ ಮೌಲ್ಯಗಳು ಎನ್ನಬಹುದು. ವರ್ಣ ನಿರ್ಮೂಲನ, ಕಾಯಕಕ್ಕೆ ಮಹತ್ವ, ಸುಳ್ಳು, ಮೋಸ, ಮಡಿವಾರಗಳನ್ನು ತೊಡೆದು ಹಾಕುವ ಪ್ರಯತ್ನ ಎದ್ದುಕಾಣುತ್ತದೆ. ಭಕ್ತಿಗೆ, ದಯೆಗೆ, ವಿನಯಕ್ಕೆ ಪ್ರಾಶಸ್ತ್ಯಕೊಟ್ಟಿರುವುದನ್ನು ಕಾಣುತ್ತೇವೆ. ಇಷ್ಟೆಲ್ಲಾ ಸರ್ವಸಮಾನತೆಯ, ಸ್ವಾತಂತ್ರ್ಯ ಸಮಾಜದ ಕನಸು ಕಂಡ ಅವರು ಮತ್ತೊಂದು ಮಾತನ್ನು ಹೇಳಿರುವುದು ತುಂಬಾ ಅರ್ಥವತ್ತಾಗಿದೆ.

ಎಡದ ಕೈಯಲು ಹಾಲ ಬಟ್ಟಲು, ಬಲದ ಕೈಯಲು ಓಜುಗಟ್ಟಿಗೆ
ಆವಾಗ ಬಂದನು ನಮ್ಮಯ್ಯ
ಬಡಿದು ಹಾಲ ಕುಡಿಸುವ ತಂದೆ!

ಸಮಾಜವನ್ನು ಸುವ್ಯವಸ್ಥಿತ ಸನ್ಮಾರ್ಗದಲ್ಲಿ ನಡೆಸಿಕೊಂಡು ಹೋಗಬೇಕಾದರೆ ಕೇವಲ ಒಳ್ಳೆಯತನ, ಅನುಕಂಪೆ, ವಾತ್ಸಲ್ಯವೇ ಸಾಕಾಗದು, ಬೆದರಿಸಿ, ಗದರಿಸಿ ಆಳುವ ಸಾತ್ತ್ವಿಕ ಆಗ್ರಹದ ದಂಡನೀತಿಯೂ ಬೇಕು. ಇಲ್ಲದಿದ್ದರೆ ಸಮಾಜ ಮಾತು ಕೇಳುವುದಿಲ್ಲ ಎಂಬ ಅರಿವು ಬಸವಣ್ಣನವರಿಗೆ ಮೂಡಿರಬೇಕು.[೧]

ವ್ಯಕ್ತಿಗೆ ಒಂದು ಮುಖವಾದರೆ ವ್ಯಕ್ತಿತ್ವಕ್ಕೆ ಹಲವು ಮುಖಗಳು ಬಸವಣ್ಣನವರು ಬಹುಮುಖಿ ವ್ಯಕ್ತಿತ್ತ್ವದ ಕೈಗನ್ನಡಿ. ಮರೆತ ಮಾನವರನ್ನು ಎಚ್ಚರಿಸಿದ ಅರಿತ ಶರಣರ ಶ್ರೇಷ್ಠ ಜೀವನದ ಜೀವಂತ ಕೈಪಿಡಿ, ಸರ್ವಸಮಾನತೆ ಅಸ್ಪೃಶ್ಯೋದ್ಧಾರ, ಜಾತಿ, ಲಿಂಗ ಹಾಗೂ ವೃತ್ತಿ ಭೇದ ನಿರಾಕರಣೆ ಕಾಯಕತತ್ವ ಪ್ರತಿಪಾದನೆ, ಮಹಿಳೆಯ ಉನ್ನತಿ, ಸಾಮಾಜಿಕ ಸಂಸ್ಕರಣೆಯ ಸಂಘಟನೆ ಹಾಗೂ ಸುಧಾರಣೆಗಳನ್ನು ಕ್ಷಿಪ್ರ ಕಾಲಾವಧಿಯಲ್ಲಿ ಮಾಡಿದ ಮಹಾಪುರುಷ ಜಗದ್ವ್ಯಾಪಿಯಾದ ಸಾರ್ವಕಾಲಿಕ ತತ್ವಗಳನ್ನು ಸಾರಿದ ವಿಶ್ವಮಾನವ, ಧಾರ್ಮಿಕ ದೃಷ್ಟಿಯ ನೈತಿಕ ನೆಲೆಗಟ್ಟಿನ ಪರಿಶುದ್ಧ ನಡೆ-ನುಡಿಯ, ತ್ಯಾಗ-ಭೋಗ ಸಮನ್ವಯದ ದಿವ್ಯ ಜೀವನ ಸಾಗಿಸಿದ ಜಗಜ್ಯೋತಿ, ವಿಶ್ವಪ್ರೇಮ, ವಿಶ್ವಬಾಂಧವ್ಯ ಹಾಗೂ ವಿಶ್ವಮೈತ್ರಿಗಳನ್ನು ನಿರ್ಮಿಸಿದ ವಿಶ್ವಭೂತಿ.[೨]

ಬಸವಣ್ಣನವರ ವ್ಯಕ್ತಿಗತ ಸಾಧನೆಯನ್ನು ಬಿಟ್ಟು ಅವರ ಸಮಾಜ ಬೋಧನೆಯಲ್ಲಿ ಸಾಮಾಜಿಕ ಪ್ರಜ್ಞೆಯನ್ನು ಕಾಣಬಹುದು. ಬಸವಣ್ಣನವರು ಮುಗಿಲಿಗೇರಿದರೂ ನೆಲವನ್ನು ಮರೆಯದ ಕಾರಣ ಅವರಿಗೆ ವಚನಕಾರರಲ್ಲೇ ಅಪಾರ ಪ್ರಾಶಸ್ತ್ಯ ದೊರೆತಿದೆ.

---

೧. ಬಸವಪುರುಷ, ಸಂ. ಹಾ.ಮಾ.ನಾಯಕ, ಪುಟ ೧೬೨.
೨. ಅದೇ, ಪುಟ ೧೮೫.

# ಅಧ್ಯಾಯ – ೫

# ಸರ್ವಜ್ಞನ ತ್ರಿಪದಿಗಳಲ್ಲಿ ಸಾಮಾಜಿಕಪ್ರಜ್ಞೆ

ಸರ್ವಜ್ಞ ಸಾಮಾನ್ಯನಂತೆ ಈ ನೆಲದ ಮನುಷ್ಯನಾಗಿ ಬದುಕಿದವನು. ಸಾವಿರ ಊರು ತಿರುಗಿದವನೂ ಸಾವಿರ ಸತ್ಯಗಳನ್ನು ಕಂಡವನು. ಅವನು ಜಗತ್ತಿನಿಂದ ಕಲಿತದ್ದು ಅಪಾರ. ಹಾಗೆ ಹೆಕ್ಕಿಕೊಂಡ ಸಾಮಗ್ರಿಯನ್ನು ವಿವೇಚಿಸಿ ಅಣಿಮುತ್ತುಗಳಂಥ ಮಾತನ್ನಾಡಿದ್ದಾನೆ. ಸರ್ವಜ್ಞ ವಿರೋಧಿ ಶಕ್ತಿಗಳ ಅನೀತಿಯುತ ಮೌಲ್ಯಗಳ ಸಂಗಡ ಎಂದೂ ರಾಜಿ ಮಾಡಿಕೊಂಡವನಲ್ಲ. ಇದಕ್ಕೆ ನುಡಿಗಡಣದಲ್ಲಿಯೆ ದಾಕ್ಷಿಣ್ಯಕ್ಕೆ ಸಿಕ್ಕಿದ ನಿಷ್ಠುರ ಸತ್ಯಗಳೇ ಪುರಾವೆಯನ್ನು ಒದಗಿಸುತ್ತದೆ.

ಸರ್ವಜ್ಞನಿಗೆ ಸಾಮಾಜಿಕ ಮೌಲ್ಯಗಳ ಬಗ್ಗೆ ಅತ್ಯಂತ ಆಸ್ಥೆ ಇತ್ತು ಎಂಬುದಕ್ಕೆ ಅವನ ವಚನದಲ್ಲಿನ ತುಡಿತ–ಮಿಡಿತಗಳನ್ನು ಗಮನಿಸಿದರೆ ಅರಿವಾಗುತ್ತದೆ. ಸರ್ವಜ್ಞನ ತರುವಾಯ ಬಂದವರು ಅವನದೇ ರೀತಿ ಬರೆದು ಜನಮಾನಸದಲ್ಲಿ ಚಿಂತನೆಯ ಹಡಗುಗಳನ್ನು ತೇಲಿಬಿಟ್ಟಿರಲೂಬಹುದು. ಆದರೆ ಯಾವುದು ಸಮರ್ಥವಾದುದೋ, ಸತ್ವಪೂರ್ಣವಾದುದೋ ಅಂಥದ್ದು ಮಾತ್ರ ಉಳಿದುಕೊಂಡಿರಬಹುದಾದ ಸಾಧ್ಯತೆಗಳಿವೆ. ಆ ಸಾಮರ್ಥ್ಯದ ಹಿಂದೆಯೂ ಸರ್ವಜ್ಞನ ಮಾತಿನ ವಿಧಾನದ ವರ್ಚಸ್ಸನ್ನು ಗುರುತಿಸಬಹುದು.[೧]

ಸರ್ವಜ್ಞ ಕನ್ನಡದ ಜನಪ್ರಿಯ ಕವಿ. ಸಾಂಪ್ರದಾಯಿಕವಾದ ಯಾವುದೇ ಕಾವ್ಯ ಪ್ರಕಾರಕ್ಕೆ ಸೇರದ ಅವನ ರಚನೆಗಳು ಕನ್ನಡ ಜನಮಾನಸದ ವೈಚಾರಿಕ ಪ್ರೇರಣೆಯಾಗಿ ಉಳಿದು ಬಂದಿವೆ. ಅವನು ನಿರ್ಭಯವಾಗಿ, ನಿಚ್ಚಳವಾಗಿ ವ್ಯಕ್ತಪಡಿಸಿರುವ ವಿಚಾರಗಳು ಸರ್ವಕಾಲಕ್ಕೂ ಪ್ರಸ್ತುತವೆನಿಸಿವೆ. ಸಮಾಜವನ್ನು ದರ್ಶಿಸಿದ ಸರ್ವಜ್ಞ ಧಾರ್ಮಿಕ ಅಥವಾ ಮತೀಯ ಆಚಾರ–ವಿಚಾರಗಳನ್ನು ಸಮಾಜದಲ್ಲಿನ ವಿವಿಧ ವರ್ಗಗಳನ್ನು ವ್ಯಕ್ತಿಗತ ವರ್ತನೆಗಳನ್ನು ತನ್ನ ವಿವೇಕದ ಒರಗೆ ಹಚ್ಚಿದ್ದಾನೆ. ಈ ವಿಷಯಗಳನ್ನು ಸ್ಥೂಲವಾಗಿ ವಿವರಿಸುವ ಅಗತ್ಯವಿದೆ.

ಕನ್ನಡನಾಡಿನಲ್ಲಿ ರಾಜಕೀಯ, ಧಾರ್ಮಿಕ, ಸಾಮಾಜಿಕ ರಂಗಗಳಲ್ಲಿ ನೈತಿಕ ಶೈಥಿಲ್ಯವು ತಲೆದೋರಿದಂತಹ ಕಾಲದಲ್ಲಿ ಸರ್ವಜ್ಞನು ಜನ–ಮನವನ್ನು ಸಂಸ್ಕರಿಸುವ

---

೧. ಸರ್ವಜ್ಞ ಕವಿ, ಡಾ. ಜಿ.ಎಸ್.ಶಿವರುದ್ರಪ್ಪ, ಪುಟ ೭೬.

ಕಾರ್ಯವನ್ನು ಕೈಗೊಂಡ. ಶ್ರೇಷ್ಠ ವರ್ಣದವರೆಂದು ಭಾವಿಸಲಾದ ಬ್ರಾಹ್ಮಣರ ಬಗೆಗೆ ಸರ್ವಜ್ಞನ ಗಮನ ಹೆಚ್ಚಾಗಿ ಹರಿದುದು ಸ್ವಾಭಾವಿಕವಾಗಿದೆ. ವೈದಿಕ ಮತದ ಜಡ್ಡುಗಟ್ಟಿದ ಮೌಲ್ಯಗಳ ವಿರುದ್ಧ ಬಂಡೆದ್ದ. ವೀರಶೈವ ಪರಂಪರೆ ಒಂದು ಕಡೆ, ಮನಸ್ಸಿನಾಳದಲ್ಲಿ ಚಿಟುಕು ಮುಳ್ಳಾಡಿಸುತ್ತಿದ್ದ ತಂದೆಯ ಬಗೆಗಿನ ಅಸಮಾಧಾನ, ಆಕ್ರೋಶ ಇನ್ನೊಂದು ಕಡೆ. ಸಮಕಾಲೀನ ಸಮಾಜದ ಶ್ರೀಸಾಮಾನ್ಯ ವರ್ಗವೆನಿಸಿದ ಶೋಷಿತರ ಕುರಿತ ಅನುಕಂಪ ಮತ್ತೊಂದು ಕಡೆ. ಇವೆಲ್ಲವುಗಳ ಸಮನ್ವಿತ ರೂಪದ ಸಂಕೀರ್ಣವಾದ ಮನೋಧರ್ಮವೇ ಸರ್ವಜ್ಞನ ಈ ಬ್ರಾಹ್ಮಣ ಸಮಾಜ ವಿಮರ್ಶೆಯ ಮೂಲಸೆಲೆಯಾಗಿದೆ. ಭಾವನಾ ವಿವಶತೆಯನ್ನು ಮೆಟ್ಟಿ ಮೇಲೆದ್ದ ವಸ್ತು ನಿಷ್ಠತೆಯನ್ನು ಮೈಗೂಡಿಸಿಕೊಂಡ ವೈಚಾರಿಕ ಪ್ರಜ್ಞೆ ಪ್ರಶಂಸನೀಯವಾದ ರೀತಿಯಲ್ಲಿ ಇಲ್ಲೆಲ್ಲ ಪ್ರಕಟಗೊಂಡಿದೆ.



ಜಾತಿ ಜಾತಿಗೆ ವೈರನೀತಿ ಮೂರ್ಖಗೆ ವೈರ
ಪಾತಕವು ವೈರ ಸುಜನರ್ಗೆ ಅರಿದಂಗೆ
ಏತರದು ವೈರ ಸರ್ವಜ್ಞ.

ಅರಿತವಾದ ಸರ್ವಜ್ಞನಿಗೆ ಯಾರ ಬಗೆಗೂ ವೈರದ್ವೇಷವಿಲ್ಲ. ಸುಜನನು ಆದ ಆತನಿಗೆ ವೈರವೇನಾದರೂ ಇದ್ದುದೇ ಆದರೆ ಅದು ಪಾತಕದ ವಿಷಯದಲ್ಲಿ ಮಾತ್ರ. ಇಂತಹ ವಸ್ತುನಿಷ್ಠ ನ್ಯಾಯನಿಷ್ಟುರ ನಿಲುವನ್ನು ಯಾರಾದರೂ ವಿರೋಧಿಸಿದರೆ ಅಂಥವರು ಮೂರ್ಖರೇ ಸರಿಯೆಂಬ ಅಭಿಮತ ಆತನದು.

ಬ್ರಾಹಣ ವರ್ಗದ ಬಾಹ್ಯಾಚಾರಗಳಾದ ಸ್ನಾನ, ಸಂಧ್ಯಾವಂದನೆ, ಮಡಿವಂತಿಕೆಗಳಲ್ಲಿಯ ಕುರುಡುತನವನ್ನು ಖಂಡಿಸಿದ್ದಾನೆ.

ಮಿಂದುಂಬ ಹಾರುವನೆ ಸಂಧ್ಯವಂದನೆಯೇತಕೆ?
ಮಿಂದು ಮೈಲಿಗೆಯನುಡಲೇಕೆ? ಸ್ನಾನದ
ಸಂದೇಹವೇಕೆ? ಸರ್ವಜ್ಞ

ಬ್ರಾಹ್ಮಣನು ಸ್ನಾನ ಮಾಡಿ, ಮೈಲಿಗೆಯಿಂದ ತುಂಬಿದ್ದರೂ ನೀರು ಮಡಿ ಮಾಡಿದ ವಸ್ತ್ರದ ತುಂಡನ್ನು ಉಟ್ಟುಕೊಳ್ಳುವುದೇಕೆ? ನಿಜವಾಗಿ ಶುದ್ಧನಾಗಿದ್ದರೆ, ತಿಳಿಯದೆಯೂ ತಿಳಿದು ಮಾಡಿದ ಪಾಪಗಳನ್ನು ಕ್ಷಮಿಸೆಂದು ಬೇಡಿಕೊಳ್ಳುವ ಸಂಧ್ಯಾವಂದನೆ ಏಕೆ? ಏಕೆಂದರೆ ಆಂತರ್ಯ ಸ್ನಾನವಿಲ್ಲದ ಬ್ರಾಹ್ಮಣನು ಬಹಿರಾಚಾರಕ್ಕೆ ಬಿದ್ದು ಸಂವಹನಕ್ಕೆ ಒಳಗಾಗುವನು.

ಇದೇ ರೀತಿಯಲ್ಲಿ ತೀರ್ಥಸ್ನಾನ, ಗಂಧಾಕ್ಷತೆ, ಜನಿವಾರ ಧಾರಣೆಗಳಂಥ ಬಹಿರ್ ಆಚಾರಗಳಿಗೆ ಅವಾಸ್ತವ ಪ್ರಾಶಸ್ತ್ಯವನ್ನು ನೀಡುವ ಬ್ರಾಹ್ಮಣರನ್ನು ವಿಡಂಬಿಸುವಲ್ಲಿ ಸರ್ವಜ್ಞನ ಬಿಚ್ಚು ಮಾತಿನ ಚುಚ್ಚುಗತ್ತಿಯನ್ನು ಬೀಸಿದ್ದಾನೆ. ಮೆತ್ತಗೆ ಹೇಳಿದ ಮಾತು ಸಂಬಂಧಿಸಿದವರ ಮನಸ್ಸಿನಲ್ಲಿ ನಾಟುವುದಿಲ್ಲವೆಂದು ಡಾ.ಎಂ.ಅಕಬರ ಅಲಿ ಅವರು ಹೇಳಿದ್ದಾರೆ.

ನೀರ ಮುಳುಗಿದ ವಿಪ್ರ ಹಾರುವಡೆ ಸ್ವರ್ಗಕ್ಕೆ
ಹಾರುವನೊಲು ಮುಳುಗಿರ್ಪ ಕಪ್ಪೆ ತಾ
ಹಾರ ಬೇಕೆಂದ ಸರ್ವಜ್ಞ.

ಮುಟ್ಟಿ ಶ್ರೀಗಂಧವನು ಇಟ್ಟು ತಾ ನೊಸಲೊಳಗೆ
ನೆಟ್ಟನೆಯ ಸ್ವರ್ಗ ಪಡೆವಡೆ ಸಾಣೆಕಲ್
ಕೆಟ್ಟ ಕೇಡೇನು? ಸರ್ವಜ್ಞ.

ಮೂರೆಳೆಯನುಟ್ಟಾತ ಹಾರುವಡೆ ಸ್ವರ್ಗಕ್ಕೆ
ನೂರೆಂಟು ಎಳೆಯ ಕೌದಿಯ ಹೊದ್ದಾತ
ಹಾರನೇಕಯ್ಯ? ಸರ್ವಜ್ಞ.

ಸ್ವರ್ಗ ಸಂಪಾದನೆಯಾಗುವುದನ್ನು ನಂಬಿ ಅರ್ಥವಿಲ್ಲದ ಬಹಿರಾಚಾರಗಳಿಗೆ ಜೋತುಬಿದ್ದಿರುವ ಬ್ರಾಹ್ಮಣನನ್ನು ವಿಡಂಬಿಸಲು ಈ ತ್ರಿಪದಿಯಲ್ಲಿನ ಶ್ರೀಗಂಧ ತಯಾರು ಮಾಡುವ ಸಾಣೆಕಲ್ಲು, ಹರಕು ಕೌದಿಯನ್ನು ಹೊದ್ದ ಭಿಕ್ಷುಕ ಹಾಗೂ ನಿತ್ಯ ತೀರ್ಥಸ್ನಾನ ಮಾಡುವ ಕಪ್ಪೆ– ಈ ದೃಷ್ಟಾಂತಗಳು ಡಾಂಭಿಕ ಭಕ್ತಿಗೆ ಬಾರು ಕೋಲಿನ ಹೊಡೆತದಂತೆ ಬಾಸುಂಡೆ ಮೂಡಿಸುತ್ತವೆ. ಜೀವದ ಜೀವನ ಮೌಲ್ಯವೆಂದು ನಂಬಿದ ಸರ್ವಜ್ಞನಿಗೆ ವೈದಿಕ ಮತದ ಯಜ್ಞ ಕರ್ಮ ಅನರ್ಥಕಾರಿಯೆನಿಸುತ್ತದೆ.

ಕೊಂಡು ಮಾಡುವ ಧರ್ಮದಂದವನು ಆ ನೊರೆವೆ
ಗಂಧದ ಮರನ ನೆರೆ ಸುಟ್ಟು ಇದ್ದಿಲನು
ತಂದು ಬಡಿದಂತೆ ಸರ್ವಜ್ಞ.

ಧರ್ಮದ ಹೆಸರಿನಲ್ಲಿ ನಡೆಯುವ ಜೀವಹಿಂಸೆ ಕಂಡು ಸರ್ವಜ್ಞನ ಕವಿಹೃದಯ ಮೂಕ ಪ್ರಾಣಿಗಾಗಿ ಮರುಕವನ್ನು ವ್ಯಕ್ತಪಡಿಸಿದರೆ ಜ್ಞಾನಿಯೆನಿಸಿದ ಬ್ರಾಹ್ಮಣನ ಅವಿವೇಕತನದ ಹಿಂಸಾಚಾರ ಕಂಡು ಕನಲುತ್ತದೆ. ಗಂಧದ ಮರದ ದೃಷ್ಟಾಂತವೊಂದು ಜೀವನದ ಮೌಲ್ಯವನ್ನು ಅವಿವೇಕತನದ ಮೌಢ್ಯವನ್ನು ಅತ್ಯಂತ ಧ್ವನಿಪೂರ್ಣವಾಗಿ

ಹೊಳೆಯಿಸುತ್ತದೆ. ಆದರೆ ಇಂತಹ ನಯವಾದ ಮಾತುಗಾರಿಕೆ ನಾಜೂಕಿನ ಸೂಚ್ಯಾರ್ಥ ದಪ್ಪ ತೊಗಲಿನ ಡಂಭಾಚಾರಿಗಳ ಮೇಲೆ ಪರಿಣಾಮ ಬೀರಲಾರದೆಂಬುದು ಸರ್ವಜ್ಞನಿಗೆ ಗೊತ್ತು. ಅದಕ್ಕೇ ಆತ ವಾಚ್ಯಕ್ಕೆ ಇಳಿದ ಬಿಚ್ಚುಗತ್ತಿಯನ್ನು ಝಳಪಿಸುತ್ತಾನೆ.

ಕನ್ನೆಯಾಡನು ತಂದು ಬನ್ನ ಬಡಿಸುತ ಕೊಂದು
ಉನ್ನತವ ಪಡೆದ ವಿಪ್ರನಿಂ ಅಗಸರ
ಕುನ್ನಿ ಲೇಸೆಂದ ಸರ್ವಜ್ಞ.

ಅಗಸರ ನಾಯಿ ಅರಿವೆ ಕಾದರೆ ರೊಟ್ಟಿಯಾದರೂ ಸಿಗುವುದು ವಿಪ್ರನೂ ಇದಕ್ಕೂ ಕಡೆ ಅಂದರೆ ಯಜ್ಞದಿಂದ ಪಾಪವಲ್ಲದೇ ಪುಣ್ಯ ದೊರೆಯದು. ಅವಿವೇಕತನ ಮಾತ್ರವಲ್ಲ ಇಡೀ ಮಾನವ ಜನಾಂಗಕ್ಕೆ ಮಾಡಿದ ಮಹಾ ಅಪಚಾರವೆಂಬುದು ಸರ್ವಜ್ಞನ ನಿಲುವಾಗಿದೆ.[೧]

ಹೊಲಗೇರಿಯಲಿ ಹುಟ್ಟು ಎಲುವಿನ ಗೃಹವಾಸ
ಸಲೆ ಧರ್ಮಿದಾನಿಯೆನಿಸದೆ ಹಾರುವನು
ಕುಲಕೆ ಹೋರಿಹನು ಸರ್ವಜ್ಞ,

ಸತ್ತ ಕತ್ತೆಯ ಹೊತ್ತ ರೆತ್ತಣದ ಹೊಲೆಯನೆಂದು ನೀನೆನಬೇಡ
ನೊಂದ ಜೀವವನು ತಾನರಿವ ಹಾರುವನು
ಕೊಂದಾದ ಹೊಲೆಯ ಸರ್ವಜ್ಞ.

ಹೊಲೆ ಮಾದಿಗರಾದ ಹರಿಜನರು ವಾಸಿಸುವ ಕೇರಿ ಹೊಲಗೇರಿ ಅಲ್ಲ. ಎಲ್ಲರೂ ಹುಟ್ಟುವ ತಾಯಿಯ ಗರ್ಭ ಹೊಲಗೇರಿ! ಅದು ಎಲುಬಿನ ಗೃಹವು ಹೌದು! ವಸ್ತು ಸ್ಥಿತಿ ಹೀಗೆ ಇರುವಾಗ ಮನುಷ್ಯ ಮನುಷ್ಯರಲ್ಲಿ ಭೇದ ಮಾಡುವುದು ಕುಲಧರ್ಮ ಕಲ್ಪಿಸಿ ತಾನು ಉತ್ತಮ ಕುಲಜನೆಂದು ಸಾಧಿಸಹೊರಡುವುದು ಸಲ್ಲ, ಹಾಗೆ ನೋಡಿದರೆ ಸತ್ತ ಕತ್ತೆಯ ಹೊರುವ ಕಾಯಕದಲ್ಲಿ ನಿರತನಾಗಿ ಊರ ನೈರ್ಮಲ್ಯಕ್ಕೆ ನೆರವಾಗುವ ಶ್ರಮಜೀವಿ ಹೊಲೆಯನಲ್ಲ, ಅದಕ್ಕೆ ಪ್ರತಿಯಾಗಿ ತಾನು ಉತ್ತಮ ಕುಲಜನೆಂದು ಬೀಗಿ ಹೆರೆವರ ಒಡವೆ ಸಂಪತ್ತು ಎತ್ತಿಹಾಕುವ, ದೋಚುವ ಬ್ರಾಹ್ಮಣ ಹೊಲೆಯ! ಪ್ರಾಣಿಗಳನ್ನು ಕೊಂದು ತಿನ್ನುವ ಈ ಮಾಂಸಹಾರಿಯು ಹೊಲೆಯರಲ್ಲ ಪ್ರಾಣಿಗಳನ್ನು ಕೊಲ್ಲುವ ಬ್ರಾಹ್ಮಣನೇ ಹೊಲೆಯ! ನೊಂದ ಜೀವಿಗಳಾದ ಶೂದ್ರಾದಿವರ್ಗದ ಶೋಷಣೆ

೧. ಸರ್ವಜ್ಞ ಕವಿ ಡಾ. ಜಿ.ಎಸ್.ಶಿವರುದ್ರಪ್ಪ, ಪುಟ ೫೬.

ನಡೆಸುವಾತ ಹೊಲೆಯ ಅರ್ಥಾತ್ ಆತ ಜೀವಹಿಂಸೆ, ಸಾಮಾಜಿಕ ಶೋಷಣೆಯನ್ನು ನಿಲ್ಲಿಸಿ ದಾನಿ–ಧರ್ಮಿ ಎನಿಸಲು ಶ್ರಮಿಸುವುದೊಳಿತು.

ನಡೆವುದೊಂದೇ ಭೂಮಿ ಕುಡಿವುದೊಂದೇ ನೀರು!
ಸುಡುವುದೊಂದೇ ಇರುತಿರಲು ಕುಲಗೋತ್ರ
ನಡುವೆ ಎತ್ತಣದು? ಸರ್ವಜ್ಞ.

ಶರೀರ ರಚನೆಯ ದೃಷ್ಟಿಯಿಂದ ನೋಡಿದರೂ ಈ ಭೇದ ಭಾವಕ್ಕೆ ಯಾವ ಆಧಾರವೂ ಇಲ್ಲ ಏಕೆಂದರೆ ಎಲ್ಲ ಮಾನವರದ್ದೂ

ಎಲು ತೊಗಲು ನರಮಾಂಸ ಬಲಿದ ಚರ್ಮದ ಹೊದಿಕೆ
ಹೊಲೆ ರಕ್ತ ಶುಕ್ಲದಿಂದಾಗುವ ದೇಹ . . . . . .

ಈ ಕುಲಭೇದದ ಉಚ್ಚ–ನೀಚ ಭಾವದ ದುಷ್ಟ ಪ್ರಥೆ ಬ್ರಾಹ್ಮಣ ಸಮಾಜದ ಗಡಿಗೆರೆಯ ಹೊರಗೆ ಮಾತ್ರವಲ್ಲ ಒಳಗೂ ಅನರ್ಥವನ್ನು, ಅನ್ಯಾಯವನ್ನು ಮಸೆದಿದೆ.

ಬೆಂದ ಮನೆ ಬಾಗಿಲಿಗೆ ಮುಂದೆ ತೋರಣವೇಕೆ
ಸಂದ ಶೂದ್ರತಿಯ ಒಡನುಂಬ ಹಾರುವಗೆ
ಮಿಂದೂಟವೇಕೆ? ಸರ್ವಜ್ಞ.

ಹೀಗೆ ಕುಲಭೇದದ ದುಷ್ಟ ಸಂಪ್ರದಾಯದ ಅರ್ಥಹೀನ ಅವಿಚಾರತೆಯನ್ನು ಅನರ್ಥಕರ ಅನಾಚಾರಪರತೆಯನ್ನು ಪರಾಮರ್ಶಿಸಿದ ಸರ್ವಜ್ಞ ಉತ್ತಮಿಕೆಯ ಮೂಲ ದ್ರವ್ಯವಾವುದೆಂಬುದರ ಬಗೆಗೂ ಚಿಂತನೆ ನಡೆಸಿದ್ದಾನೆ. ಅದು ಯಾವೊಂದು ವರ್ಗದ ಅಥವಾ ಜಾತಿಯ ಹುಟ್ಟು ಗುಣವೂ ಅಲ್ಲ. ಅದು ವ್ಯಕ್ತಿಯೊಬ್ಬನ ಅಂತಃಸತ್ವದ ಹರಳು ಮಾನವೀಯತೆಯ ಹರಳು.

ಉತ್ತಮದ ವರ್ಣಿಗಳೇ ಉತ್ತಮರು ಎನಬೇಡ
ಮತ್ತೆ ತನ್ನಂತೆ ಬಗೆವರನೆಲ್ಲರನು
ಉತ್ತಮರು ಎನ್ನು! ಸರ್ವಜ್ಞ.

ಇಂತಹ ಉತ್ತಮಿಕೆಯ ಸತ್ವ ಸಂಪನ್ನರು ಉಚ್ಚ ಜಾತಿಯಲ್ಲಿರುವಂತೆ ಜಾತಿಹೀನರಲ್ಲೂ ಇರುವುದು ಸಾಧ್ಯ.

ವೈದಿಕ ಮತದ ಯಜ್ಞ-ಯಾಗಾದಿಗಳನ್ನು ಪಶು ಬಲಿಯನ್ನು ಕಂಡು ನೊಂದ ಜೀವದಯೆಯನ್ನು ಜೀವನದ ಬಹುದೊಡ್ಡ ಮೌಲ್ಯವೆಂದು ನಂಬಿದ ಸರ್ವಜ್ಞನ ಮನವನ್ನು ಜೈನಮತದ ಅಹಿಂಸೆಯ ಆದರ್ಶ ಸೂರೆಮೂಡಿದೆ.

ಕೊಲುವ ಧರ್ಮವನೊಯ್ದು ಒತಿಯೊಳಗೆ ಇಕ್ಕುವ
ಕೊಲಲಾಗದೆಂಬ ಜೈನನ ಮತವೆನ್ನ
ತಲೆಯ ಮೇಲಿರಲಿ ಸರ್ವಜ್ಞ .

ಕೊಲುವ ಧರ್ಮ ವೆನಿಸಿದ ವೈದಿಕ ಮತವನ್ನು ಪ್ರತಿಭಟಿಸಿ ಕೊಲಲಾಗದೆಂಬ ಅಹಿಂಸಾ ತತ್ವವನ್ನು ಎತ್ತಿಹಿಡಿದ ಜೈನಧರ್ಮ ತನ್ನ ತಲೆಯ ಮೇಲಿರಲಿ ಎಂದು ಘೋಷಿಸಿದ್ದಾರೆ. ವೀರಶೈವನಾಗಿ ಬಾಳಿ ಬದುಕುತ್ತಿದ್ದರೂ ಶಿವನನ್ನು ಪರಮ ದೈವವಾಗಿ ನಿಡುನಂಬಿದ್ದರೂ ಜೈನ ಧರ್ಮವನ್ನು ಕೊಂಡಾಡಿ ಪರಧರ್ಮ ಸಹಿಷ್ಣುತೆಯನ್ನು ಗುಣಪಕ್ಷಪಾತವನ್ನು ಮೆರೆದಿದ್ದಾನೆ.[೧] ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ

ಸೃಷ್ಟಿಯಲಿ ಜಿನಧರ್ಮ ಪಟ್ಟಗಟ್ಟಿರುತಿಕ್ಕು
ಕೆಟ್ಟರೆ ಕೆಡುಗು ಜಗವೆಲ್ಲ ತಲೆಹೋದ
ಅಟ್ಟಿಯಂತಿಕ್ಕು ಸರ್ವಜ್ಞ .

ಎಂದೊರೆದು ಜಿನಧರ್ಮವೇ ಸರ್ವಶ್ರೇಷ್ಠವೆಂದು ಘೋಷಿಸಿದುದಲ್ಲದೇ ಅದು ಕೆಟ್ಟರೆ ಅಹಿಂಸಾತತ್ವಕ್ಕೇ ಸಂಚಕಾರವಾಗಿ ಜಗತ್ತು ಹಾಳಾಗಿ ತಲೆಹೋದ ಮುಂಡದಂತಾಗುವುದೆಂದು ಸರ್ವಜ್ಞ ಸಾರಿದ್ದಾನೆ. ನಿಷ್ಪೃಹತೆಯೇ ಜೀವನಾಡಿಯಾದ ನ್ಯಾಯ ನಿಷ್ಠುರಿ ಸರ್ವಜ್ಞನ ಸ್ವಂತದ ಧರ್ಮವೆಂದು ವಿದ್ವಾಂಸರು ಊಹಿಸಿರುವ ವೀರಶೈವ ಮತದ ವಿಚಾರ ಮತ್ತು ಆಚಾರಗಳಲ್ಲಿಯ ವಿಸಂಗತಿಗಳನ್ನು ವ್ಯರ್ಥದ ಬಾಹ್ಯಡಂಬರಗಳನ್ನೂ ಅಷ್ಟೇ ತೀಕ್ಷ್ಣವಾಗಿ ತೆರೆದ ಮನದಿಂದ ಅವನು ಖಂಡಿಸಿದ್ದಾನೆ, ವಿಡಂಬಿಸಿದ್ದಾನೆ.

ವೀರಶೈವ ಮತದಲ್ಲಿ ಮೂಲತಃ ಪ್ರತಿಮಾ ಪೂಜೆಗೆ ಅವಕಾಶವಿಲ್ಲ. ಏಕೆಂದರೆ ಲಿಂಗ ಸ್ವರೂಪಿಯಾದ ಆ ಪರಶಿವ

---

೧. ಸರ್ವಜ್ಞ ಕವಿ ಡಾ.ಜಿ.ಎಸ್.ಶಿವರುದ್ರಪ್ಪ, ಪು. ೬೯.

ಕಲ್ಲಿನಲಿ ಕುಚದಲಿ ಬಳ್ಳದಲಿ ಹಿಕ್ಕೆಯಲಿ
ಎಲ್ಲಿ ಭಾವಿಸಿದಡಲ್ಲಿರ್ಪ ಭರಿತನು
ಹಾಗಿರುವದರಿಂದ ಲಿಂಗಕ್ಕೆ ದೇಗುಲವೇ ಇಲ್ಲ.

ಈ ಕಾರಣಕ್ಕಾಗಿಯೇ ಪ್ರತಿಮಾ ಪೂಜೆ ಅರ್ಥವಿಲ್ಲದ್ದೂ, ವ್ಯರ್ಥವಾದದ್ದೂ ಎಂಬ ನಂಬಿಕೆ ಸರ್ವಜ್ಞನದು.

ಕಲ್ಲು ಗುಂಡಿನ ಮೇಲೆ ಮಲ್ಲಿಗೆಯ ಅರಳಿಕ್ಕಿ
ನಿಲ್ಲದೆ ಹಣೆಯ ಬಡಿವರ್ಗೆ ಬುಗುಟಿಲ್ಲ
ದಿಲ್ಲ ಕಾಣಯ್ಯ ಸರ್ವಜ್ಞ .

ಪ್ರತಿಮಾ ಎಷ್ಟಾದರೂ ಕಲ್ಲು ಇಂತಹ ಕಲ್ಲುಗಳಿಗೆ ಪೂಜೆ ಪುರಸ್ಕಾರ ಜರುಗಿಸುವುದರಿಂದ ಎರುಗುವುದರಿಂದ ಯಾವ ಪ್ರಯೋಜನವೂ ಇಲ್ಲ ಪ್ರತಿಮಾ ಪೂಜೆಯಂತೆ ಸ್ಥಾವರಲಿಂಗಕ್ಕೆ ಶ್ರದ್ಧೆ ಗೌರವ ಸಲ್ಲಿಸುವುದನ್ನು ಸರ್ವಜ್ಞ ವಿಡಂಬಿಸಿದ್ದಾನೆ.

ನಂಬುತಿರು ನಂಬದಿರು ಎಂಬುವರು ಮಾನವರು
ಸಂಬಾರವರೆವ ಬಲು ಕಲ್ಲು ಹರನೆಂದು
ನಂಬುವವರಾರು ಸರ್ವಜ್ಞ .

ವೀರಶೈವ ಮತದಲ್ಲಿಯ ಕಪಟ ಜಂಗಮರೂ, ವೇಷದ ಭಕ್ತರೂ ಸರ್ವಜ್ಞನ ಪ್ರಹಾರಕ್ಕೆ ಒಳಗಾಗಿದ್ದಾರೆ.

ಜಂಗಮನು ಭಕ್ತ ತಾ ಲಿಂಗದಂತಿರಬೇಕು
ಭಂಗಿಸಿ ಪರರನಳಿವ ಜಂಗಮನೊಂದು
ಮಂಗನೆಂದರಿಗು ಸರ್ವಜ್ಞ .

ಹೀಗೆ ಸರ್ವಜ್ಞ ಕವಿ ಸ್ವಮತ –ಪರಮತವೆನ್ನದೆ ಎಲ್ಲ ಧರ್ಮಗಳ ಆಚಾರ ವಿಚಾರಗಳಲ್ಲಿಯ ತಪ್ಪು ಅವಿಚಾರ, ಆಡಂಬರ –ಮೊದಲಾದವುಗಳನ್ನು ಅಷ್ಟೇ ನ್ಯಾಯ ನಿಷ್ಠುರತೆ ನಿರ್ದಾಕ್ಷಿಣ್ಯ ಭಾವದಿಂದ ಖಂಡಿಸಿದ್ದಾನೆ. ಈ ಮೂಲಕ ತನ್ನ ಉದಾತ್ತ ಮನಸ್ಕತೆಯನ್ನು ವಿಶ್ವಮಾನ್ಯತೆಯನ್ನು ಮೆರೆದಿದ್ದಾನೆ. ಮತಧರ್ಮ ವಿಷಯಗಳನ್ನು ಚರ್ಚಿಸಿದ ಸರ್ವಜ್ಞ ವ್ಯಕ್ತಿಗತ ವರ್ತನೆಗಳ ಬಗ್ಗೆಯೂ ಗಮನಹರಿಸಿದ್ದಾನೆ. ನಾಡಿನ ಉದ್ದಗಲಕ್ಕೂ ಹಳ್ಳಿ ಹಳ್ಳಿಗಳನ್ನು ಸುತ್ತಿ ಹಳ್ಳಿಯ ಬಾಳು–ಬದುಕಿನಲ್ಲಿ ಬೆರೆತೂ ಬೆರೆಯದ ಹಾಗೆ ಬದುಕಿನ ಚೇತನ ಸರ್ವಜ್ಞನದು. ಹೀಗಾಗಿ ಅವನ ಪಾಲಿಗೆ ಸಮಕಾಲೀನ

ಸಾಮಾಜಿಕ ಜೀವನ ತೆರೆದ ಪುಸ್ತಕವಾಗಿದ್ದಿತು. ಆತನ ಸಾಕ್ಷಿ ಪ್ರಜ್ಞೆಗೆ ಅದರ ನೆಳಲು ಬೆಳಕು, ತಪ್ಪೋ–ಒಪ್ಪೋ ಯಾವುದೂ ಬಾಹಿರವಾಗಿರಲಿಲ್ಲ. ತನ್ನ ಬಂಡಾಯ ಪ್ರವೃತ್ತಿಗೆ ಸಹಜವಾಗಿ ಮೊದ ಮೊದಲು ಆತನ ಗಮನ ಸಮಾಜದ ಮುಖವಾಡಗಳನ್ನೆಲ್ಲ ಹರಿದು ಹಾಕಿ ಅದಕ್ಕೆ ನಿಜಸ್ವರೂಪವನ್ನು ತೋರಿಸಿಕೊಡುವುದರ ಕಡೆಗೇ ಹರಿದಿತು. ಹೆಣ್ಣು –ಗಂಡಿನ ಸಂಬಂಧವೂ ಈ ನಿಲುವಿಗೆ ಹೊರತಾಗಿಲ್ಲ, ಸಾಮಾಜಿಕ ಬದುಕಿನ ಬಣ್ಣದ ಪದರುಗಳ ಒಳಭಾಗದ ವ್ಯಭಿಚಾರದ ಅಸಹ್ಯ ವಿದ್ಯಮಾನಗಳೂ ಆತನ ಕಣ್ಮನಗಳನ್ನು ಸೆಳೆದು ಸಾಹಿತ್ಯ ಸೃಷ್ಟಿಗೆ ಪ್ರೇರಕವಾದವು. ಹಾಗಾದರೆ ಹುಟ್ಟಿದವನೆಂಬ ಸಾಮಾಜಿಕ ತಿರಸ್ಕಾರ ಬಹಿಷ್ಕಾರಗಳಿಂದ ಉಂಟಾದ ಕಹಿ ಕಂಡೂ ಕಾಣದಂತೆ ಮನದಾಳದಲ್ಲಿ ನೆಲೆಯೂರಿ ಸರ್ವಜ್ಞನ ಈ ಕುರಿತ ಅಭಿವ್ಯಕ್ತಿಗೆ ಪುಟಕೊಟ್ಟಿತು. ಖಂಡನೆ–ವಿಡಂಬನೆಯ ಬೆಂಕಿಗೆ ಎಣ್ಣೆ ಹೊಯ್ದಿತು.

ಸರ್ವಜ್ಞನ ಸಮೀಕ್ಷೆ –ಚಿಂತನೆಗಳಿಗೆ ಒಂದು ಮಿತಿ ಇಲ್ಲದಿಲ್ಲ, ಅದಾವ ಅತೃಪ್ತಿ, ಆಂತರಿಕ ಒತ್ತಡ, ತೀವ್ರತರವಾದ ಆಸಕ್ತಿ ಒಂದು ಗಂಡು ಅಥವಾ ಹೆಣ್ಣನ್ನು ವ್ಯಭಿಚಾರಕ್ಕೆ ಎಳೆಯುವುದೆಂಬುದನ್ನರಿಯಲು ಸರ್ವಜ್ಞ ಪ್ರಯತ್ನಿಸಿದಂತಿಲ್ಲ. ಆದರೆ ಹಾದರದ ಹುಚ್ಚು ಹಿಡಿದ ವ್ಯಕ್ತಿ ತನ್ನ ಆಸೆಯನ್ನು ಈಡೇರಿಸಿಕೊಳ್ಳಲು ಬಳಸುವ ತಂತ್ರ, ಬೀಸುವ ಬಲೆಗಳನ್ನು ಸರ್ವಜ್ಞ ಚೆನ್ನಾಗಿ ಕಂಡಿದ್ದಾನೆ. ಕಣ್ಣಿಗೆ ಕಟ್ಟುವಂತೆ ಅವುಗಳನ್ನು ಖಂಡರಿಸಿದ್ದಾನೆ.[೧]

ವ್ಯಸನದ ದೆಸೆಯಿಂದ ಮುಸಿ ಹೆಣ್ಣಿನೊಶವಾಗಿ
ಹುಸಿದು ಹೋಗುವಳ ಒಡನಾಡಿ ತಾ ನುಗ್ಗು
ನುಸಿಯಾದ ಕಾಣೋ ಸರ್ವಜ್ಞ.

ಆಕೆಯನು ಕಂಡು ಮನೆ ಯಾಕೆಯನು ಮರೆದಿಹರೆ
ಹಾಕಿದ ಹುಂಕೆ ಹರಿದಂತೆ ಮನೆಯೊಳಿ
ದ್ದಾಕೆ ತಾ ಕೆಡುಗು ಸರ್ವಜ್ಞ.

ಹಾದರವು ಮುಚ್ಚಿದರೆ ಕಾದಾರಿದಮೃತವು
ಹೋದುದನು ಒಬ್ಬರರಿದಹರೆ ಕಬ್ಬುನವ
ಕಾದ ಎಳೆದಂತೆ ಸರ್ವಜ್ಞ.

---

೧. ಸರ್ವಜ್ಞ ಕವಿ, ಡಾ. ಜಿ.ಎಸ್. ಶಿವರುದ್ರಪ್ಪ, ಪುಟ ೯೦.

ದೈಹಿಕವಾದ ಬೇಡಿಕೆಯನ್ನು ಮನಬಂದಂತೆ ಈಡೇರಿಸಿಕೊಳ್ಳುವ ಪ್ರಾಣಿ ಸಹಜ ಪ್ರಜ್ಞೆಯೇ ಆಸೆ. ಅದು ಅನಿವಾರ್ಯವಾದ ದೇಹದ ದಾಹ. ಅದು ತನ್ನ ತೃಪ್ತಿಗಾಗಿ ಅನೇಕ ವಿಧವಾಗಿ ವ್ಯಕ್ತವಾಗುತ್ತದೆ. ಅನೇಕ ಬಗೆಯಲ್ಲಿ ಕಾರ್ಯ ಪ್ರವೃತ್ತವಾಗುತ್ತದೆ. ಇಂತಹ ಈ ಆಸೆ ವಿಶೃಂಖಲತೆಯಿಂದ ವಿಜೃಂಬಿಸಿದರೆ ವ್ಯಕ್ತಿಗೆ ಮಾತ್ರವಲ್ಲ, ಸಮಾಜಕ್ಕೂ ಅದು ಅಪಾಯಕಾರಿಯೂ ಅನರ್ಥಕಾರಿಯೂ ಆಗಿ ಪರಿಣಮಿಸುತ್ತದೆ. ಆದಕಾರಣ ಸಮಾಜದ ಮಾನವರು ತಮ್ಮ ತಮ್ಮ ಕಾಲದೇಶ-ಪದ್ಧತಿಗಳಿಗನುಸಾರವಾಗಿ ಅದಕ್ಕೊಂದು ಕಟ್ಟು-ನಿಟ್ಟು ಅಗತ್ಯವೆಂದು ಬಗೆದಿದ್ದಾರೆ. ಹಿತಕಾರಿಯಾದ ನಿಯಮವೇ ಮಾನವನ್ನು ಪಶುತ್ವದಿಂದ ಮೇಲಕ್ಕೆತ್ತುವ ಹಾಗೂ ದೇವತ್ವದ ನೆಲೆಗೊಯ್ಯಬಹುದಾದ ಒಂದು ಸೋಪಾನವೆಂದು ಭಾವಿಸಿದ್ದಾರೆ. ಸರ್ವಜ್ಞನ ಚಿಂತನೆಯೂ ಅದನ್ನೇ ಆವಿಷ್ಕರಿಸಿದೆ. ಇಹದ ಸ್ವರ್ಗ-ನರಕಗಳೆರಡೂ ಆಸೆಯನ್ನೇ ಅವಲಂಬಿಸಿವೆ. ಮಾನವ ಮಾತ್ರರೆಲ್ಲರಿಗೂ ಆಸೆಗಳು ಇದ್ದೇ ಇರುತ್ತವೆ. ಆದರೆ ಮನುಷ್ಯ ತಾನು ಅವುಗಳಿಗೆ ಆಳಾಗದೆ ಅವೇ ತನಗೆ ಆಳಾಗುವಂತೆ ನೋಡಿಕೊಳ್ಳುವುದು ಒಳಿತು. ಏಕೆಂದರೆ ಆತನ ಹಿತಾಹಿತಗಳೆಲ್ಲ ಅದನ್ನೇ ಅನುಸರಿಸುತ್ತವೆ. ಅದರಲ್ಲೂ ಹೆಣ್ಣು-ಮಣ್ಣು-ಹೊನ್ನಿನ ಆಸೆಗಳನ್ನು ಗೆಲ್ಲುವುದಂತೂ ಅನಿವಾರ್ಯವಾಗಿವೆ.

ಮಣ್ಣು ಬಿಟ್ಟವ ದೈವ ಹೊನ್ನು ಬಿಟ್ಟವ ದೈವ
ಹೆಣ್ಣು ನೆರೆ ಬಿಟ್ಟರವ ದೈವ ಜಗಕೆ ಮುಕ್ಕಣ್ಣನೇ
ದೈವ ಸರ್ವಜ್ಞ .

ಇಲ್ಲಿ ಮುಕ್ಕಣ್ಣನೆಂಬ ಪದ ಅರ್ಥದ ಎರಡು ಆಯಾಮಗಳನ್ನು ತೆರೆಯುತ್ತದೆ. ಹೊನ್ನು-ಹೆಣ್ಣು-ಹೊನ್ನಿನ ಆಸೆಗಳನ್ನೆಲ್ಲ ಮುಕ್ಕಿದಂತವನೇ ಮುಕ್ಕಣ್ಣ ಆ ಪರಶಿವನ ಪ್ರತಿ ಮೂರ್ತಿಯೆಂಬುದು ಒಂದು. ಹೆಣ್ಣು ಹೊನ್ನು, ಮಣ್ಣಿನ ಆಸೆಗಳನ್ನು ಮೀರಬಲ್ಲ ಅರಿವಿನ ಮೂರು ಕಣ್ಣು ಉಳ್ಳಾತನೇ ಮುಕ್ಕಣ್ಣ ಶಿವ ಎಂಬುದು ಇನ್ನೊಂದು. ಮೊದಲಿನ ಅರ್ಥ ಸರ್ವಸಂಗ ಪರಿತ್ಯಾಗಿಯಾಗಬಹುದಾದ ಶಿವಯೋಗಿಯ ಪರವಾಗಿದ್ದಾರೆ ಎರಡನೆಯ ಅರ್ಥ ಸಂಸಾರದಲ್ಲಿದ್ದೂ ವಿವೇಕಶಾಲಿಯಾಗಿ ಆಸೆಗಳನ್ನು ತನ್ನ ಹತೋಟಿಯಲ್ಲಿಟ್ಟುಕೊಳ್ಳ ಬಲ್ಲ ಸಂಸಾರಿಯ ಪರವಾಗಿದೆ ಎಂದೆಸನಿಸುತ್ತದೆ.

ಮಾನವನನ್ನು ಅಡ್ಡ ದಾರಿಗೆ ಎಳೆಯುವ ದೌರ್ಬಲ್ಯ-ದುರ್ಗುಣಗಳಲ್ಲಿ ಸುಳ್ಳುತನ, ಕಳ್ಳತನಗಳು ಮುಖ್ಯವಾಗಿ ಅದರಿಂದಾಗಿಯೇ ಅವು ಪ್ರಪಂಚದಾದ್ಯಂತ

ಮಹಾ ಪಾಪಗಳೆಂದೇ ಪರಿಗಣಿತವಾಗಿವೆ. ಸರ್ವಜ್ಞನದೂ ಅದೇ ಅಭಿಪ್ರಾಯ ಅವನ ದೃಷ್ಟಿಯಲ್ಲಿ

ಕಳ್ಳತನ ಮೋಸಗಳು ಸುಳ್ಳಿನ ಮೂಲವವು
ಕಳ್ಳ ಕೈಗಳ್ಳ ಮೈಗಳ್ಳನೊಮ್ಮೆ ತಾ
ಕೊಳ್ಳ ಗಾಣವನು ಸರ್ವಜ್ಞ.
ಹುಸಿಯ ಪೇಳುವುದರಿಂದ ಹಸಿದು ಸಾವುದು ಲೇಸು
ಹುಸಿದು ಮೆರೆಯುವನ ಬದುಕಿಂದ ಹಂದಿಯ
ಇಸಿಯು ಲೇಸೆಂದ ಸರ್ವಜ್ಞ .

ಯಾವುದೇ ಒಂದು ಸ್ವಾರ್ಥ ಪ್ರಯೋಜನಕ್ಕಾಗಿ ಹೊಟ್ಟೆ ಹೊರದು ಕೊಳ್ಳುವುದಕ್ಕಾಗಿ ಹುಸಿ ಹೇಳವುದಕ್ಕಿಂತೂ ಹಸಿ ಸಾಯುವುದೇ ಮೇಲು ಹಾಗಾದಲ್ಲಿ ದಿಟವೇ ಪುಣ್ಯದ ಪುಂಜವಾಗಿರುವುದರಿಂದ ಸತ್ಯವಂತಿಕೆಯ ಪರಿಪಾಲನೆಯಾದಂತಾಗಿ ಪುಣ್ಯ ಪ್ರಾಪ್ತಿಯಾಗುವುದು. ಅದನ್ನು ಬಿಟ್ಟು ಸುಳ್ಳು ಹೇಳಿ ಅದರ ಪರಿಣಾಮವಾಗಿ ಕ್ಷಣಿಕವಾಗಿ ಮೆರೆಯಬಹುದಾದ ಸುಳ್ಳಿಗನ ಬದುಕು ಹಂದಿಯ ಇಸೆಯಂತೆ, ನಿಕೃಷ್ಟವೂ ಹೇಯವೂ ಆಗಿ ಪರಿಣಮಿಸುತ್ತದೆ.

ಸರ್ವಜ್ಞನ ಹತ್ತಾರು ವಚನಗಳಲ್ಲಿ ದಾನದ ಪ್ರಸ್ತಾಪ ಬಂದಿದೆ. ಅದರ ಮಹತ್ವವನ್ನು ಪ್ರಯೋಜನವನ್ನು ಮತ್ತೆ ಮತ್ತೆ ಬೇಸರಿಸದೆ ನಿರೂಪಿಸಿದ್ದಾನೆ. ಭಾರತೀಯ ಪರಂಪರೆಯಲ್ಲಿ ದಾನ ಒಂದು ಮೌಲ್ಯವಾಗಿ ಪುರಸ್ಕೃತವಾಗಿದೆ. ದಾನ ಎಂದರೆ ಬೇಡದೇ ಬಂದದ್ದು, ಭಿಕ್ಷೆ ಬೇಡಿ ಪಡೆದದ್ದು.

ಬ್ರಾಹ್ಮಣ ಷಟ್ಕರ್ಮಗಳಲ್ಲಿ ದಾನ ಒಂದು (ಯಜನ, ಯಾಜನ ಅಧ್ಯಯನ ಅಧ್ಯಾಪನ, ದಾನ, ಪರಿಗ್ರಹಗಳು ಷಟ್ಕರ್ಮಗಳು) ದಾನಗಳಲ್ಲಿ ವೈವಿಧ್ಯವುಂಟು ಅನ್ನದಾನ, ವಸ್ತುದಾನ, ಹಿರಣ್ಯದಾನ(ಬಂಗಾರ) ಗೋದಾನ, ದ್ರವ್ಯದಾನ, ವಿದ್ಯಾದಾನ, ಕನ್ಯಾದಾನ, ಭೂದಾನ, ಮಹಾಭಾರತದ ಅನುಶಾಸನಪರ್ವದಲ್ಲಿ ಭೀಷ್ಮನು ಯುಧಿಷ್ಠರನಿಗೆ ದಾನಧರ್ಮದ ಸ್ವರೂಪವನ್ನು ಕುರಿತು ಸುದೀರ್ಘವಾಗಿ ಬೋಧಿಸುತ್ತಾನೆ.

ದಾನವನ್ನು ಎಲ್ಲರೂ ಸದ್ಭಾವದಿಂದ ಸದುದ್ದೇಶದಿಂದ ಮಾಡುವುದಿಲ್ಲ. ಆರುಣಿ ಎಂಬ ಮುನಿ ಯಜ್ಞಾಂತ್ಯದಲ್ಲಿ ಮುದಿ ಎತ್ತುಗಳನ್ನು ಬ್ರಾಹ್ಮಣರಿಗೆ ದಾನ ಮಾಡುತ್ತಿದ್ದನಂತೆ ಇದನ್ನು ಕಂಡು ಅವನ ಮಗ ನಚಿಕೇತ ಬೇಸರಿಸಿ, ತನ್ನ

ತಂದೆಯನ್ನು ಕುರಿತು, ನನ್ನನ್ನು ಯಾರಿಗೆ ದಾನ ಮಾಡುತ್ತೀಯ ಎಂದು ಕೇಳಿದ ಕುಪಿತನಾದ ತಂದೆ, 'ಯಮ'ನಿಗೆ ಎಂದ. ನಚಿಕೇತ ನೇರ ಯಮಾಲಯಕ್ಕೆ ತೆರಳಿ ಯಮನ ಸೇವೆ ಮಾಡಿ ಅವನಿಂದ ಜ್ಞಾನ ಸಂಪಾದಿಸಿದನಂತೆ, ಪ್ರಹ್ಲಾದ ಮೊಮ್ಮಗನಾದ ಬಲಿ ಚಕ್ರವರ್ತಿ ಅಶ್ವಮೇಧ ಯಾಗ ಮಾಡಿ ಅಂತ್ಯದಲ್ಲಿ ದಾನ ಮಾಡುತ್ತಿದ್ದಾಗ ಬಲಿಚಕ್ರವರ್ತಿಯಲ್ಲಿ ಮೂರಡಿ ನೆಲವನ್ನು ಬೇಡಿ ಹರಿ ವಾಮನ ಅವತಾರದಲ್ಲಿ ಬಲಿಯನ್ನು ತುಳಿದ ಕಥೆ ಪ್ರಸಿದ್ಧ. ಈ ಹಿನ್ನೆಲೆಯಲ್ಲಿ

ಈವಂಗೆ ದೇವಂಗೆ ಆವುದಂತರವಯ್ಯಾ
ದೇವನು ಜಗಕೆ ಕೊಡುವನು, ಕೈಯಾರೆ
ಈವನೇದೇವ ಸರ್ವಜ್ಞ.

"ದಾನಿಗೂ ದೇವನಿಗೂ ಭೇದವಿಲ್ಲ, ಕೈಯಾರೆ, ಮನಸಾರೆ ದಾನ ಮಾಡುವವನೇ ದೇವನು" ಎಂದು ಕಂಠೋಕ್ತವಾಗಿ ಸಾರಿದ್ದಾನೆ.

ಪರುಪಕಾರಗಳನುರೆಮಾಳ್ಪ ಮಾನವನೇ
ಪರಶಿವ ಕಳು ಹಲವ ಬಿಂದು ಧರೆಯೊಳಗೆ
ಮರಗುತ್ತ ಮಿರ್ಕು ಸರ್ವಜ್ಞ.

ಪರೋಪಕಾರಿ ಮಾನವನಲ್ಲ; ಪರಶಿವನ ಪ್ರತಿನಿಧಿ, ಅವನ ಆಜ್ಞೆಯಂತೆ ಬಂದು ಇಲ್ಲಿ ಕಳಕಳಿಸುತ್ತಿದ್ದಾನೆ.

ಕೊಟ್ಟದ್ದು ತನಗೆ ಬಯಚಿಟ್ಟುದು ಪರರಿಗೆ
ಕೊಟ್ಟದ್ದು ಕೆಟ್ಟಿತೆನ ಬೇಡವದು ಮುಂದೆ
ಕಟ್ಟಿದ ಬುತ್ತಿ ಸರ್ವಜ್ಞ.

ದಾನ ಕೊಟ್ಟಿದ್ದು ತನಗೆ ಮತ್ತೆ ದಕ್ಕುತ್ತದೆ, ಮುಚ್ಚಿ ಇಟ್ಟದ್ದು (ದ್ರವ್ಯ) ಪರರ ಪಾಲಾಗುತ್ತದೆ. ದಾನ ಮಾಡಿದ್ದು (ಸಾವಿನನಂತರ) ಮುಂದಿನ ಜೀವನ ಯಾತ್ರೆಯಲ್ಲಿ ಅದು ಪುಣ್ಯದ ಬುತ್ತಿಯಾಗಿ ಉಳಿದಿದೆ. ಆತ್ಮಸಂತೋಷಕ್ಕಾಗಿ ದಾನ ಫಲಾಪೇಕ್ಷೆಯಿಲ್ಲದ ದಾನ ಎಂಬುದೆಲ್ಲ ಬರೀ ಆದರ್ಶವಾದಿತು. ಆದ್ದರಿಂದ ಸರ್ವಜ್ಞ ದಾನ ಮಾಡಿದರೆ ದೊರೆಯುವ ಲೌಕಿಕ, ಆಮುಷ್ಮಿಕ ಫಲಗಳನ್ನು ತೋರಿಸುತ್ತಾನೆ.

ಅನ್ನವನು ಇಕ್ಕುವುದು ನನ್ನಿಮನು ನುಡಿಯುವುದು
ತನ್ನಂತೆ ಪರರಬಗೆದಡೆ ಕೈಲಾಸ
ಬಿನ್ನಾಣವಕ್ಕು ಸರ್ವಜ್ಞ.

ಪರಮ ಪದವಿಗೆ ಸಾಧಕವಾದ ಮೂರು ಕರ್ಮಗಳೆಂದರೆ ಅನ್ನದಾನ, ಸತ್ಯವಚನ, ತಾನು–ನೀನು ಎಂಬಲ್ಲಿ ಅಭೇದ ಅಷ್ಟೇ ಸಾಕು. ಕೆಲವರು ದಾನ ಮಾಡುತ್ತಾರೆ ಚೌಕಾಸಿ ಮಾಡಿ, ಅಳೆದು, ಸುರಿದು, ಕಾಡಿಸಿ, ಬೇಡಿಸಿ ಕೊನೆಗೆ ದಾನ ಮಾಡುತ್ತಾರೆ. ಹಾಗೆ ಮಾಡದೆ ತ್ವರಿತದಲ್ಲಿ ದಾನ ಕೊಡಬೇಕು. ಕೊಟ್ಟು ಆಡಿಕೊಳ್ಳಬಾರದು ಮತ್ತು ಅಗತ್ಯವನ್ನು ಅರಿತು ದಾನಮಾಡಬೇಕು.

ಆಗ ಬಾ ಈಗ ಬಾ ಹೋಗಿ ಬಾ ಎನ್ನದೆ
ಆಗಲೇ ಕರೆದು ಕೊಡುವವನ ಧರ್ಮ ಹೊ
ನ್ನಾಗದೇ ಬಿಡದು ಸರ್ವಜ್ಞ,

ಆಡದೆ ಕೊಡುವವನು ರೂಢಿಯೊಳಗುತ್ತಮನು
ಆಡಿ ಕೊಡುವವನು ಮಧ್ಯಮನಧಮ ತಾ
ನಾಡಿ ಕೊಡದವನು ಸರ್ವಜ್ಞ.

ಪ್ರಚಾರ ಮಾಡದೆ, ಮೌನವಾಗಿ, ಕಾಡದೆ ತಕ್ಷಣ ಕೊಡುವವನು ಉತ್ತಮ ದಾನಿ ಅಹಂಕಾರವೆಂದರೆ ನಾನು ಎನ್ನುವ ಹೆಮ್ಮೆ ನಾನೇ ಮಿಗಿಲೆಂಬ ಸೊಕ್ಕು, ಮನುಷ್ಯನಿಗೆ ಇದು ಆವರಿಸಲು ದೇಹಬಲ, ಧನಬಲ, ವಿದ್ಯಾಬಲ, ಅಧಿಕಾರ ಬಲಗಳಲ್ಲಿ ಯಾವುದಾದರೊಂದೋ ಹಲವೋ ಕಾರಣವಾಗಿರುತ್ತದೆ. ಆದ್ದರಿಂದ ಅಹಂಕಾರವೆಂಬುದು ಒಂದು ದೃಷ್ಟಿಯಲ್ಲಿ ಎಂಥವರ ತಲೆಯನ್ನೂ ತಿರುಗಿಸಬಲ್ಲ ಅಮಲು ಇದ್ದಂತೆ. ಇದರಿಂದಾಗಿಯೇ ಮನುಷ್ಯ ಮದಾಂಧ ಗಜದಂತೆ ವರ್ತಿಸುತ್ತಾನೆ. ಉರಿದಾಡುತ್ತಾನೆ.

ಅಂಧಕನು ನಿಂದಿರಲು ಮುಂದೆಬಪ್ಪರ ಕಾಣ
ಬಂದರೆ ಬಾಯೆನದಿರ್ಪ ಗರ್ವಿಯ
ದಂದುಗವೆ ಬೇಡ ಸರ್ವಜ್ಞ.

ಅಹಂಕಾರವಿರುವ ವ್ಯಕ್ತಿ ಉನ್ಮತ್ತವಿಕಾರಿ. ಅವನು ಬಹುದಿನ ಬಾಳ್ವ ಸರಕಲ್ಲ,

ಹಮ್ಮು ಎಂಬುವ ಕಿಚ್ಚು ಒಮ್ಮಲೇ ನಂದುವದೇ
ಬೊಮ್ಮ ಹರಿವೆಂದು ಜಗವೆಂದುದಾ ಕಿಚ್ಚ
ಗುಮ್ಮಿಹನೆ ಯೋಗಿ ಸರ್ವಜ್ಞ.

ಯಾವುದಾದರೊಂದು ಮಾನಸಿಕ ವ್ಯತೆಯ, ವ್ಯಗ್ರತೆಯ ಮರೆವಿಗಾಗಿಯೋ ಬೇಸರದ ಪರಿಹಾರಕ್ಕಾಗಿಯೋ ಮೋಜಿಗಾಗಿಯೋ ಸಹವಾಸದ ಸುಖಕ್ಕಾಗಿಯೋ

ಸಾಮಾನ್ಯವಾಗಿ ಮನುಷ್ಯ ಒಂದಿಲ್ಲೊಂದು ವ್ಯಸನಕ್ಕೆ ಶರಣುಹೋಗುತ್ತಾನೆ. ಗಂಡು-ಹೆಣ್ಣಿನ ವೈವಾಹಿಕ ಸಂಬಂಧದ ಸ್ವರೂಪವನ್ನು ಕುರಿತು ಸರ್ವಜ್ಞ ಈ ರೀತಿ ಚಿಂತನೆ ನಡೆಸಿದ್ದಾನೆ.

ಮನಬಂದ ಹೆಣ್ಣನ್ನು ವಿನಯದಲಿ ಕರೆದಿತ್ತು
ಮನಮುಟ್ಟಿ ಬಾಳ್ವೆ ಮಾಡಿದರೆ ಅಮೃತದ
ಕೆನೆಯ ಸವಿದಂತೆ ಸರ್ವಜ್ಞ .

ಸಂಸಾರದ ಸುಖ-ಸಂಭ್ರಮಗಳಿಗೆ ಪ್ರೀತಿಯೊಂದೇ ಇದ್ದರೆ ಸಾಲದು ಅಷ್ಟರಿಂದಲೇ ಸಂಸಾರದ ರಥ ಸಾಗದು, ಸುಖ ದಕ್ಕದು, ಅದನ್ನು ಅರಿತೇ ಸರ್ವಜ್ಞ ಹೀಗೆ ಹೇಳಿದ್ದಾನೆ.

ಬೆಚ್ಚನಾ ಮನೆಯಾಗಿ ವೆಚ್ಚಕ್ಕೆ ಹೊನ್ನಾಗಿ
ಇಚ್ಚೆಯನು ಅರಿವ ಸತಿಯಾಗಿ ಸ್ವರ್ಗಕ್ಕೆ
ಕಿಚ್ಚು ಹಚ್ಚೆಂದ ಸರ್ವಜ್ಞ .

ಹೀಗೆ 'ಇಚ್ಚೆಯನು ಅರಿವ ಸತಿ, ಬೆಚ್ಚಗಿನ ಮನೆ, ವೆಚ್ಚಕ್ಕೆ ಸಾಕಷ್ಟು ಹೊನ್ನು' ಈ ಮೂರನ್ನೂ ಹೊಂದಿರುವವನ ಬದುಕು ಸ್ವರ್ಗೀಯ ಜೀವನಕ್ಕಿಂತಲೂ ಮಿಗಿಲಾದುದು. ಸರ್ವಜ್ಞನ ಈ ಚಿಂತನೆ ಬದುಕಿನ ಆದರ್ಶವನ್ನು ಬೆಳಗುತ್ತಲೇ ಇಹದ ನಿಷ್ಠೆಯನ್ನು ಅದರಲ್ಲಿ ಸುಳುಹು ಗಾಣಿಸಲು ಅದರ ಹಿರಿಮೆಯನ್ನು ಹೊಳೆಯಿಸಲು ಹವಣಿಸಿದೆ.

ಮಾನವ ಸದಾ ತನ್ನ ಪರಿಸರದ ದುರ್ಜನರ ಬಗೆಗೆ ಎಚ್ಚರಿಕೆ ವಹಿಸಲೇಬೇಕು ಸಜ್ಜನರ ಸಂಗತಿಯ ಫಲ ಎಂಥದೆಂಬುದನ್ನು ಮನಸ್ಸಿನಲ್ಲಿ ಹಸಿರಾಗಿ ಇರಿಸಿಕೊಂಡು ತನ್ನ ಬದುಕಿನ ಒಳಿತನ್ನು ತಾನು ಸಾಧಿಸಬೇಕು ಈ ಕುರಿತು ಸರ್ವಜ್ಞ ಅನುಭವ ಮನನೀಯವಾಗಿದೆ.

ಸಜ್ಜನರ ಸಂಗವದು ಹೆಜ್ಜೇನು ಕೊಡದಂತ
ದುರ್ಜನರ ಸಂಗದೊಡನಾಟ ಬಚ್ಚಲಿನ
ರೊಚ್ಚಿನಂತಿಹುದು ಸರ್ವಜ್ಞ .

ಕುದಿಯದ ಕೂಳಿಂದ ಹದುಳದಂಬಲಿ ಲೇಸು
ಹೃದಯಶೂನ್ಯರುಗಳೊಲವಿಂದ ಅರಿದರಲಿ
ಕದನವೆ ಲೇಸು ಸರ್ವಜ್ಞ .

ಮನುಷ್ಯ ಸಾಮಾನ್ಯ ವ್ಯವಹಾರಗಳ ಕಡೆ ಗಮನ ಹರಿಸಿದ ಸರ್ವಜ್ಞ ರಾಜಕೀಯ ವ್ಯವಹಾರಗಳ ಕಡೆಗೂ ಚಿಂತನೆ ನಡೆಸಿದ್ದಾನೆ. ಅಂದು ರಾಜ ಪ್ರಭುತ್ವಕ್ಕೆ ಮೊದಲ ಮಣೆ ಸಲ್ಲುತ್ತಿದ್ದು, ಚಿಕ್ಕ–ದೊಡ್ಡ ಸಾಮ್ರಾಜ್ಯಗಳು ವೈಭವಯುತವಾಗಿ ಮೆರೆಯುತ್ತಿದ್ದವು. ಸಾಮಾನ್ಯವಾಗಿ ಅರಸರ ಪ್ರಭುತ್ವ ಅಧಿಕಾರ ನಿರಂಕುಶವಾಗಿತ್ತು. ರಾಜರ ದರ್ಬಾರು ಕಾರಭಾರಗಳ ಇಷ್ಟಾನಿಷ್ಟ ಪರಿಣಾಮ ಅವರಿಗೆ ನೇರವಾಗಿ ಸಂಬಂಧಿಸಿದವರ ಮೇಲೆ ಹೆಚ್ಚಾಗಿ ಆಗುತ್ತಿದ್ದಿತಾದರೂ ಪರೋಕ್ಷವಾಗಿ ಅದರ ಝಳ ಜನ ಸಮುದಾಯಕ್ಕೆ ತಾಗದೇ ಬಿಡುತ್ತಿರಲಿಲ್ಲ. ಅವರ ದರ್ಪ–ದೌರ್ಜನ್ಯಗಳನ್ನಂತೂ ಮೂಕ ಜನತೆ ಮೌನವಾಗಿ ಸಹಿಸದೇ ಗತಿಯಿರಲಿಲ್ಲ."[೧]

ಇಂದು ಅಂತಹ ಪರಮಾಧಿಕಾರ ಕೇಂದ್ರೀತವಾದ ರಾಜಾಡಳಿತ ವ್ಯವಸ್ಥೆ ಕುಸಿದು ಜನತಂತ್ರದ ವಿಕೇಂದ್ರೀಕೃತ ಆಡಳಿತ ನಿತ್ಯಾನುಭವದ ಬೆಳಕಿನಲ್ಲಿ ನೋಡಿದರೆ ಹಿಂದಿನ ಪರಿಸ್ಥಿತಿಯೇ ಇದ್ದಿರುವುದು ಗಮನಕ್ಕೆ ಬರುತ್ತದೆ ಈ ಕಾರಣಕ್ಕಾಗಿಯೇ ಸರ್ವಜ್ಞನ ವ್ಯಾವಹಾರಿಕ ಅನುಭವ ನಿಷ್ಠೆ, ಚಿಂತನೆ ಇಂದಿಗೂ ಕೆಲಮಟ್ಟಿಗೆ ಪ್ರಸ್ತುತವಾಗಿರುವುದನ್ನು ಕಾಣಬಹುದು.

ಅರಸರ ದೌರ್ಬಲ್ಯಗಳನ್ನು ಸರ್ವಜ್ಞ ಗುರುತಿಸಿದ್ದಾನೆ. ಅವನ ಅನುಭವದಲ್ಲಿ ಅರಸರು ಚಿತ್ತ ಚಾಂಚಲ್ಯಕ್ಕೆ ಹೆಸರಾದವರು. ಆದುದರಿಂದ ಅವರೊಡನೆ ವ್ಯವಹರಿಸುವಾಗ ಯಾರೇ ಆಗಲಿ ಮೈಯಲ್ಲ ಕಣ್ಣಾಗಿರುವುದು ಉತ್ತಮ ಎಂಬುದು ಸರ್ವಜ್ಞನ ಅಭಿಮತ.

ಅರಸನೊಲಯಿಸುವರೆ ಕರಭೀತಿ ಬೇಕಯ್ಯ
ಅರಸು ಕರಿಯುರಗನೊಳೆಚ್ಚರವಿಲ್ಲದಿರೆ
ತ್ವರಿತದಿಂ ತೊಲಗು ಸರ್ವಜ್ಞ.

ನಚ್ಚಿದಂತರಸಿನ ಇಚ್ಛೆಯಂತಿರುವುದು
ಒಚ್ಚೊತ್ತು ತಪ್ಪಿ ನಡೆದಿಹರೆ ಹೊತ್ತಾರೆ
ಕಿಚ್ಚು ಹಚ್ಚಿದಂತೆ ಸರ್ವಜ್ಞ.

ಸರ್ವಜ್ಞನ ಈ ಜೀವನಾನುಭವ ಇಂದಿನ ಹೊಸ ಪರಿಸ್ಥಿತಿಯಲ್ಲಿ ಹೊಂದು–ವಂತದಾಗಿದೆ. ಇಂದು ರಾಜ–ಮಹಾರಾಜರಿಲ್ಲದಿದ್ದರೂ ಸರ್ಕಾರಿ ಕಛೇರಿ, ಇನ್ನಿತರ ಸಂಘಸಂಸ್ಥೆಗಳಲ್ಲಿಯ ಅಧಿಕಾರಿವರ್ಗದ ಕಾರುಬಾರು ದರಬಾರುಗಳು ಹಿಂದಿನ ಅರಸರ

೧. ಸರ್ವಜ್ಞ ಕವಿ, ಡಾ. ಜಿ.ಎಸ್.ಶಿವರುದ್ರಪ್ಪ, ಪುಟ ೧೮೦.

ಆಡಳಿತದ ಅಂಧ ಆಡಳಿತವನ್ನೇ ಅಂಧಾನುಕರಿಸುತ್ತಲಿವೆ. ಅವರೊಡನೆ ವ್ಯವಹರಿಸುವ ಅವರ ಕಾಲಡಿಯಲ್ಲಿ ಬಾಳಿ ಬದುಕುವ ಬಡ ಜೀವಿಗಳಿಗೆ ಈ ಅನುಭವದ ಮಾತು ವ್ಯಾವಹಾರಿಕವಾದ ಯಶಸ್ಸಿಗೆ ನೆರವಾಗದಿರದು. ಆದರೆ ಆಳುವವರ ಇಲ್ಲಿಯ ಧ್ವನಿ ಸರ್ವಜ್ಞನ ಸಮಕಾಲೀನ ರಾಜಕೀಯ ಸ್ಥಿತಿಯಲ್ಲಿ ಸಂಗತವಾಗಿದ್ದರೂ ಆಕ್ಷೇಪಾರ್ಹವೂ ಆಗಿದೆ. ಕೇವಲ ದೈಹಿಕ ರೂಪಿನಿಂದ ಯಾರೂ ಮನುಷ್ಯರಾಗುವುದಿಲ್ಲ. ಮನುಷ್ಯ ಹೇಗಿದ್ದಾನೆ? ಎಲ್ಲಿದ್ದಾನೆ? ಎನ್ನುವುದಕ್ಕಿಂತ ಏನು ಮಾಡಿಕೊಂಡಿದ್ದಾನೆ. ಅವನ ನಡೆನುಡಿಗಳು ಉತ್ತಮವಾಗಿದೆಯೇ? ಎಂಬುದೇ ಬಹುಮುಖ್ಯ ಕೆಲವರು ಬರೀ ಒಣ ವೇದಾಂತದ ಮಾತಾಡುತ್ತಾರೆಯೇ ಹೊರತು ಕಾರ್ಯ ಸ್ಥಿತಿ–ಗತಿ ಏನು ಎಂಬುದನ್ನು ಚಿಂತಿಸಲಾರರು. ಅಂತಹವರ ಬಗ್ಗೆ ಖಾರವಾಗಿ ನುಡಿಯುತ್ತ

ಆಡದೇ ಮಾಡುವವನು ರೂಢಿಯೊಳಗುತ್ತಮನು
ಆಡಿ ಮಾಡುವವನು ಮಧ್ಯಮನು ಅಧಮ ತಾ
ಆಡಿಯೂ ಮಾಡ ಸರ್ವಜ್ಞ.

ಮನುಕುಲಕ್ಕೆ ಹಿತವಾದುದನ್ನು ಮಾತಾಡದೇ ಮಾಡಿ ತೋರಿಸುವ ಛಲವುಳ್ಳವನು ಉತ್ತಮ ಕೆಲವೊಮ್ಮೆ ನುಡಿದು ಅದರಂತೆ ನಡೆದಾದರೂ ತೋರಿಸುವವನು ಮಧ್ಯಮ ನುಡಿದರೂ ಅದರಂತೆ ಪರಿಪಾಲಿಸದೇ ಬದುಕುವವರನ್ನು ಕಂಡು ಅಧಮ ಎಂದು ಹೀಯಾಳಿಸಿದ್ದಾನೆ.

ಮದ್ಯಪಾನ, ಭಂಗಿ ಸೇದುವುದರ ವಿರುದ್ಧ ಸರ್ವಜ್ಞ ತೀಕ್ಷ್ಣವಾಗಿ ಎಚ್ಚರಿಸಿದ್ದಾನೆ.

ಭಂಗಿಯನು ಸೇದುವವನ ಭಂಗವನು ಏನೆಂಬೆ
ಭಂಗಿಯ ಗುಂಗು ತಲೆಗೇರಲಾಡುವ
ಮಂಗನಂತಿಹನು ಸರ್ವಜ್ಞ.

ಸುರೆಯ ಹಿರಿದುಂಡುವಗೆ ಉರಿಯ ಮೇಲ್ದುಡುಕುವಗೆ
ಹರಿಯುವ ಹಾವ ಪರನಾರಿ ಪಿಡಿದಂಗೆ
ಮರಣ ಕಾಣಯ್ಯ ಸರ್ವಜ್ಞ.

ಭಂಗಿ ಸೇದುವುದರಿಂದ ಮನಸ್ಸು, ಹೃದಯ ಅಸ್ವಸ್ಥಗೊಂಡು ಆರೋಗ್ಯ ಹಾಳಾಗುತ್ತದೆಂಬ ಭಯಾನಕತೆಯನ್ನು ತಿಳಿಸಿದ್ದಾನೆ. ಅಷ್ಟೇ ಅಲ್ಲ ಭಂಗಿಯ ವಾಸನೆ ಇಡೀ ದೇಹವನ್ನಾವರಿಸಿದರೆ, ಮಂಗನಂತೆ ವರ್ತಿಸಬಹುದೆಂಬ ಕಿವಿಮಾತನ್ನು ಹೇಳಿದ್ದಾನೆ. ಸುರೆ, ಮಾಂಸ ಸೇವಿಸಿದವನು ಕೈಯಲಿ ಬೆಂಕಿ, ಹಾವು ಹಾಗೂ

ಪರನಾರಿಯನ್ನು ಹಿಡಿದು ಪ್ರಾಣ ಮತ್ತು ಅವಮಾನಕ್ಕೊಳಗಾಗಿ ಮರಣದ ಗತಿಗೆ ತಲುಪುತ್ತಾನೆಂಬ ಮೊನಚು ಮಾತುಗಳಿಂದ ಹೃದಯಕ್ಕೆ ನಾಟುವಂತೆ ತಿವಿದಿದ್ದಾನೆ. ಮನಸ್ಸಿನ ಕಲ್ಮಶಗಳನ್ನು ತೊಳೆದು ಅಲ್ಲಿ ಆತ್ಮ ಜ್ಞಾನವನ್ನು ಪಡೆಯಲು ಗಳ ಹದ ಮಾಡಿದ್ದಾನೆ.

ಒಂದು ಸಂಸ್ಕೃತಿಯ ವಿಕಾಸಪಥದಲ್ಲಿ ಮತ್ತೆ ಮತ್ತೆ ಪ್ರತಿಪಾದಿತವಾಗಿ ಪ್ರಸ್ತಾಪಿಸಲ್ಪಟ್ಟಿರುವ ನಂಬಿಕೆ–ನಡಾವಳಿಗಳೇ ಮೂಲಭೂತ ಮೌಲ್ಯಗಳಾಗಿ ಪರಿಗಣಿತವಾಗುತ್ತದೆ. ಈ ಬಗೆಯ ಮೌಲ್ಯಗಳನ್ನು ಕಟ್ಟು–ನಿಟ್ಟಾಗಿ ಉಸಿರಾಡುವುದು, ಬಾಳಿ ಬದುಕುವುದು ಹೆಚ್ಚಾಗಿ ಕನಸಿನ ಗಂಟಾಗಿಯೇ ಉಳಿಯುವುದುಂಟು. ಆದರೆ ಜೀವಂತವಾದ ಒಂದು ಸಂಸ್ಕೃತಿ ತನ್ನ ಚೇತನವನ್ನು ಜ್ವಲಂತವಾಗಿರಿಸಿಕೊಳ್ಳುವ ಅರ್ಥಾತ್ ಅಗತ್ಯವಾದ ತಿಳಿವಿನ ಬೆಳಕನ್ನು ಪಡೆದು ಚೇತರಿಸಿಕೊಳ್ಳುವ ಇಂತಹ ಮೌಲ್ಯಗಳತ್ತ ಮುಖ ಮಾಡುತ್ತದೆ. ಆಗ ಮರಳು ಗಾಡಿನ ಸುತ್ತಾಟದಿಂದ ಕಂಗೆಟ್ಟ ದಾರಿ ಹೋಕನೊಬ್ಬನಿಗೆ ವನವನ್ನು ಕಂಡಾಗ ಆಗುವ ಅಪೂರ್ವ ಅನುಭವ ಅಪಾರ ಸಂತೋಷ ಅಂತಹ ಸಂಸ್ಕೃತಿಗೆ ಆಗುತ್ತದೆ. ಅಂತೂ ಈ ಜೀವನ ಮೌಲ್ಯಗಳು ಒಂದು ಸಂಸ್ಕೃತಿಗೆ ಅಥವಾ ಅದರ ವಾಹಕವಾದ ಮಾನವನ ನಿರಂತರ ಪ್ರಯತ್ನವನ್ನು ಪ್ರೇರೇಪಿಸುತ್ತವೆ, ಸಫಲ ಸಾಧನೆಗಳನ್ನು ಬೆಳಗುತ್ತವೆ. ನಿರಾಸೆಯ ಗಳಿಗೆಯಲ್ಲಿ ವಿವೇಕದ ಹೊಳೆಮಿಂಚು ಬೆಳಗಿಸಿ ಆಸೆಯನ್ನು ಪುನರುಜ್ಜೀವನಗೊಳಿಸುತ್ತವೆ.

ಕನ್ನಡ ಸಂಸ್ಕೃತಿಯ ಕಾಲವಾಹಿನಿಯಲ್ಲಿ ತೇಲಿ ಬಂದ ಜೀವನ ಮೌಲ್ಯಗಳನ್ನು ಸಮಕಾಲೀನ ಸಮಾಜದ ಸೃಜನಶೀಲ ಸಮೀಕ್ಷಕನಾಗಿ ಪರಿಶೀಲಿಸಿ ಪರಿಶೋಧಿಸುವ ಒಂದು ಪ್ರಾಮಾಣಿಕ ಪ್ರಯತ್ನವನ್ನು ಸರ್ವಜ್ಞ ನಡೆಸಿದ್ದಾನೆ. ಸಮಾಜದ ವಿವಿಧ ಮತ–ವರ್ಗಗಳ ವಿಚಾರ ಪ್ರಣಾಲಿ ಆಚಾರದ ಅಸಂಗತಿಗಳನ್ನು ತಾನು ಬದುಕಿದ ಐತಿಹಾಸಿಕ ಸಂದರ್ಭಕ್ಕೆ ಅನುಗುಣವಾಗಿ ಆಳವಾಗಿ ಬಗೆದು, ಅಳೆದು ತೂಗಿ ಮೌಲ್ಯಗಳ ಕುರಿತ ತನ್ನ ಮೌಲಿಕ ಚಿಂತನೆಯನ್ನು ಸರ್ವಜ್ಞ ತನ್ನ ವಚನಗಳಲ್ಲಿ ಹರಳು ಗಟ್ಟಿಸಿದ್ದಾನೆ. ಆತನ ಈ ವಿವೇಕಯುತವಾದ ಮನನ–ಮಂಥನ ಇಂದಿಗೂ ಬೆಳಕನ್ನು ನೀಡ ಬಲ್ಲುದಾಗಿದೆ.

## ಅಧ್ಯಾಯ – ೬

# ಬಸವಣ್ಣ–ಸರ್ವಜ್ಞರ ಆಯ್ದ ವಚನಗಳ ಸಾಮಾಜಿಕ ಮೌಲ್ಯದ ತೌಲನಿಕ ವಿವೇಚನೆ

ಕನ್ನಡ ಸಾಹಿತ್ಯ ಹಲವು ತಿರುವುಗಳಲ್ಲಿ ಹಾದು ಬಂದಿದೆ. ಕಾಲದಿಂದ ಕಾಲಕ್ಕೆ ಕಾಣಿಸಿಕೊಂಡ ಚಳವಳಿಗಳು ಮತ್ತು ಸಾಹಿತ್ಯಿಕ ಪ್ರವೃತ್ತಿಗಳು ಇದಕ್ಕೆ ಕಾರಣವಾಗಿವೆ. ಸಾಮಾಜಿಕ ಒತ್ತಡ, ಚಾರಿತ್ರಿಕ ಪರಿಸರ ಧಾರ್ಮಿಕ ಒತ್ತಾಯಗಳು ಇದರಲ್ಲಿ ಪ್ರಮುಖ ಪಾತ್ರವಹಿಸಿವೆ. ಇದೆಲ್ಲಕ್ಕೂ ಮಿಗಿಲಾಗಿ ಕವಿಗಳ ವೈಯಕ್ತಿಕ ಪ್ರತಿಭೆ ಕೂಡ ಕಾರಣವಾಗಿದೆ. ಕೆಲವೊಮ್ಮೆ ಈ ಪ್ರತಿಭೆಯೊಂದೇ ಪಲ್ಲಟಕ್ಕೆ ನಿಮಿತ್ತವಾಗಿರುವುದಿದೆ. ಪ್ರಾಚೀನ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ವಚನಕಾರರು ಮತ್ತು ಕೀರ್ತನಕಾರರ ಕಾಲ ಸಾಮಾಜಿಕ ಆಂದೋಲನದ ಅಂಗವಾಗಿ ಕೆಲಸ ಮಾಡಿರುವುದನ್ನು ನೋಡುತ್ತೇವೆ. ಬದುಕಿನ ಚಟುವಟಿಕೆ ಜೊತೆಗೆ ಇದು ಕ್ರಿಯಾಶೀಲವಾದುದರಿಂದಲೋ ಏನೋ ಸಾಮಾಜಿಕ ಮತ್ತು ಸಾಹಿತ್ಯಿಕ ಪಲ್ಲಟಕ್ಕೆ ಏಕಕಾಲದಲ್ಲಿ ಕಾರಣವಾದ ಸೋಜಿಗವೊಂದು ಜರುಗಿತು. ಈ ಅವಧಿಯನ್ನು ಬಿಟ್ಟರೆ ಉಳಿದಂತೆ ಕವಿಗಳ ವೈಯಕ್ತಿಕ ಸಾಮರ್ಥ್ಯ ಮತ್ತು ಪರಂಪರೆಯ ಜೊತೆಗಿನ ಅವರ ಸಂಬಂಧವೇ ವಿಜೃಂಭಿಸಿರುವ ಹಾಗೆ ತೋರಿದೆ. ಈ ದೃಷ್ಟಿಯಿಂದ ಕವಿಯೊಬ್ಬ ತನ್ನ ಸ್ವಂತ ಪ್ರತಿಭೆಯಿಂದ ಏಕಾಂಗಿಯಾಗಿ ನಿಂತು ಜನಪ್ರಿಯತೆ ಉತ್ತುಂಗ ಶಿಖರವನ್ನು ಏರಿದ ಸ್ಪಷ್ಟ ಉದಾಹರಣೆ ಸರ್ವಜ್ಞ ಕವಿಯಲ್ಲಿದೆ. ಅವನೇನೂ ಸಾಮಾಜಿಕ ಬದಲಾವಣೆಗೆ ಕಾರಣವಾಗದಿದ್ದರೂ ಅವನ ಹಾಗೇ ಸ್ಥಳೀಯ ಅನುಭವವನ್ನು ಸೂರೆಗೊಂಡವರು ಅಪರೂಪವೆಂದೇ ಹೇಳಬೇಕಾಗುತ್ತದೆ. ಜನಪ್ರಿಯತೆಯಲ್ಲಿ ವಚನಕಾರರು ಮತ್ತು ಕೀರ್ತನೆಕಾರರಿಗೆ ಅವನು ಅದ್ವಿತೀಯ, ಆದರೆ ಯಾವುದೇ ಸಾಂಘಿಕ ಬಲವಿಲ್ಲದೆ ಏಕಾಂಗಿಯಾಗಿಯೇ ಸಮಾಜದ ಗುಣದೋಷಗಳನ್ನು ಎತ್ತಿ ಆಡಿದುದರಲ್ಲಿ ಅವನು ಅದ್ವಿತೀಯ.

ನಿಜವಾಗಿ ಸರ್ವಜ್ಞ ವಚನಕಾರರ ಉತ್ತರಾಧಿಕಾರಿಯೆಂದು ಡಾ.ಎಂ.ಚಿದಾನಂದ ಮೂರ್ತಿ ಅವರು ಅಭಿಪ್ರಾಯಪಟ್ಟಿರುವುದು ಸರಿಯಾಗಿಯೇ ತೋರುತ್ತದೆ. ಸರ್ವಜ್ಞ ಮನೆಯಿಂದ ಬಹಿಷ್ಕೃತನಾಗಿ ಹೊರ ಬಿದ್ದು, ಅವನು ಲೋಕದಲ್ಲಿ ತಾನು ಕಂಡದ್ದರ ಬಗ್ಗೆ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸುತ್ತ ಏಕವಾಗಿ ಉಳಿದದ್ದನ್ನು ಹೇಳಿಕೊಂಡಿದ್ದಾನೆ. ಯಾವುದಕ್ಕೂ ಯಾರಿಗೂ ಅಂಟಿಕೊಳ್ಳದೆ ಈ ಪ್ರಪಂಚದಲ್ಲಿ ಏಕಾಂಗಿಯಾಗಿ ಸ್ವತಂತ್ರ

ವ್ಯಕ್ತಿಯಾಗಿ ಅವನು ಬದುಕಿನ ಅವನ ಏಕಾಂತತೆಯು ಪಲಾಯನವಲ್ಲ, ಜೀವನದಲ್ಲೇ ಇದ್ದು ಅದರಲ್ಲಿ ಆಸಕ್ತಿಯನ್ನು ಉಳಿಸಿಕೊಂಡೂ ನಿರ್ಲಿಪ್ತವಾಗಿ ಉಳಿಯುವ ಎಲ್ಲ ದೇಶಗಳ ಎಲ್ಲ ಕಾಲದ ಮಹಾಸತ್ವರ ಅಸಾಧಾರಣವೂ ಅಸಾಧ್ಯವೂ ಆದ ಒಂಟಿತನ. ಅವನು ಜನಗಳ ಮಧ್ಯೆ ಜನರ ಜೊತೆ ಬೆರೆತು ಪರಕೀಯವಾಗಿ ಬದುಕಿದ ಈ ಜೀವನದ ಬಗ್ಗೆ ಅವನು ಮಾಡಿರುವ ವಿಮರ್ಶೆ ಅವನ ತ್ರಿಪದಿಗಳಲ್ಲಿ ಕಂಡುಬರುತ್ತದೆ. ಈ ದೃಷ್ಟಿಯಿಂದ ಅವನಿಗೂ ವಚನಕಾರರಿಗೂ ಬಹುದೊಡ್ಡ ಹೋಲಿಕೆಯಿರುವುದು ಸ್ಪಷ್ಟ. ಜೀವನವನ್ನು ಸಾಕ್ಷಿಯಾಗಿ ನೋಡಿ ವ್ಯಾಖ್ಯಾನಿಸುವ ಕನ್ನಡದ ಅತೀ ವಿರಳ ಚಿಂತಕನಾಗಿದ್ದಾನೆ ಸರ್ವಜ್ಞ,

ವಚನಕಾರರು ಯಾವ ಧಾರ್ಮಿಕ ಸಂಪ್ರದಾಯವನ್ನು ಒಪ್ಪಿಕೊಂಡರೋ ಅದಕ್ಕೂ ಸರ್ವಜ್ಞನಿಗೂ ಹೇಗೆ ಸಂಬಂಧ ಕಲ್ಪನೆಯಾಯಿತೆಂಬುದು ಬಹುಶಃ ಕೊನೆಯವರೆಗೂ ಅಜ್ಞಾತವಾಗಿ ಉಳಿಯುತ್ತದೆ. ಅವನು ಹುಟ್ಟಿನಿಂದ ವೀರಶೈವ-ನಲ್ಲದಿದ್ದರೂ ಅವನ ಮನೋಭಾವಕ್ಕೆ ವಚನಕಾರರ ವೈಚಾರಿಕ ಧೋರಣೆ ಬಹಳವಾಗಿ ಹಿಡಿಸಿದಂತೆ ತೋರುತ್ತದೆ. ಅವನ ರಚನೆಗಳಲ್ಲಿ ಬರುವ ಷಟ್ಸ್ಥಲದ ಪ್ರಸ್ತಾಪ, ಇಷ್ಟಲಿಂಗ, ಜಂಗಮಗಳನ್ನು ಹೊಗಳಿರುವುದು, ಬಸವಣ್ಣನವರನ್ನು ಗೌರವದಿಂದ ಸ್ಮರಿಸುವುದು ಇತ್ಯಾದಿಗಳು ಅವನಿಗೂ ವೀರಶೈವ ಸಂಪ್ರದಾಯಕ್ಕೂ ಇದ್ದ ನಿಕಟ ಸಂಬಂಧವನ್ನು ಸೂಚಿಸುತ್ತವೆ. ಸರ್ವಜ್ಞನಿಗೆ ಇದ್ದ ಮಾನಸಿಕ ಹಿನ್ನಲೆಯನ್ನು ನೋಡಿದರೆ ವಚನಕಾರರ ಕಾಲದ ಕ್ರಾಂತಿಯ ಯುಗಕ್ಕೆ ಸೇರಿದವನೆಂದು ತೋರಿದರೂ ವಾಸ್ತವವಾಗಿ ಇದ್ದದ್ದು ವಚನಕಾರರ ವೈಚಾರಿಕ ಪ್ರಖರತೆಯು ತಣ್ಣಗಾಗಿ ಅದೊಂದು ಸಾಂಪ್ರದಾಯಿಕ ಮತವಾಗಿ ನೆಲೆ ನಿಂತಿದ್ದ ಕಾಲದಲ್ಲಿ. ಸರ್ವಜ್ಞನ ಆದರ್ಶ ಪ್ರಪಂಚದಲ್ಲಿ ಇದ್ದವರು ವಚನಕಾರರು, ಅದರ ತುಂಬ ಅವರ ಭಕ್ತಿ, ವಿಚಾರ, ಆಚಾರ, ವ್ಯವಹಾರಗಳು, ನಡೆ-ನುಡಿಗಳಿದ್ದ ಹೊಂದಾಣಿಕೆ, ಸಾಹಸ ಇತ್ಯಾದಿಗಳೇ ಅವನು ದೈಹಿಕವಾಗಿ ಇದ್ದುದ್ದು ಯಾವ ದೃಷ್ಟಿಯಿಂದಲೂ ತನಗೆ ಒಪ್ಪಿಗೆಯಾಗದ ಸಮಾಜದ ಮಧ್ಯೆ ಹೀಗೆ ನಿರ್ಜೀವ ಸಮಾಜವೊಂದಕ್ಕೆ ವಚನಕಾರರ ಆಲೋಚನೆಯ ಹೊಸರಕ್ತವನ್ನು ಹರಿಸುವ ಪ್ರಯತ್ನ ಅವನದಾಯಿತು ಅವನ ರಚನೆಗಳು ವಚನಕಾರರ ವಚನಗಳ ಬಗ್ಗೆ ಅಷ್ಟೇ ಸ್ವತಂತ್ರ ವಿಚಾರವಾದಿಯೊಬ್ಬನ ಭಾಷ್ಯವೆಂದರೂ ತಡೆದೀತು ಎಂದು ಡಾ.ಎಂ.ಚಿದಾನಂದಮೂರ್ತಿ ಅವರು ಅಭಿಪ್ರಾಯಪಟ್ಟಿದ್ದಾರೆ.

ಬಸವಣ್ಣನವರಂತೆ ಸರ್ವಜ್ಞನೂ ಸಮಕಾಲೀನ ಸಮಾಜದ ಮೇಲ್ಮೆಗಾಗಿ ಮಿಡಿದಿದ್ದಾನೆ. ಅದರ ವ್ಯವಸ್ಥೆಯನ್ನು ಕಂಡು ಕಟುವಾಗಿ ಟೀಕಿಸಿದ್ದಾನೆ. ಬೇರೆ ಬೇರೆ

ಜಾತಿಗಳ ಬಗ್ಗೆ ಇವನಂತೆ ಹೆಸರು ಹೇಳಿ ನಿಷ್ಠುರವಾಗಿ ಖಂಡಿಸಿರುವವರು ವಿರಳ. ಧಾರ್ಮಿಕ ಡಾಂಭಿಕತನ, ಜಾರರು ಸೋರರು, ಮೂರ್ಖರು, ಕಪಟರು, ಜೂಜುಗಾರರು ಎಲ್ಲರೂ ಇವನ ಚಾಟಿಯೇಟಿಗೆ ಗುರಿಯಾಗಿದ್ದಾರೆ. ಎ.ಆರ್.ಕೃಷ್ಣಶಾಸ್ತ್ರಿಗಳ ಮಾತಿನಲ್ಲಿ ಹೇಳುವುದಾದರೆ ಅವನ ಬರವಣಿಗೆ ದನದಂತೆ ನುಗ್ಗುತ್ತದೆ. ಅದರ ಜೊತೆಗೆ ಸಮಾಜದಲ್ಲಿ ಉತ್ತಮವಾದದ್ದನ್ನು ಕಂಡಾಗ ಸಂಕೋಚವಿಲ್ಲದೆ ಮೆಚ್ಚಿದ್ದಾನೆ. ಸರ್ವಜ್ಞನ ರಚನೆಗಳ ಉದ್ದೇಶ ನೀತಿ ಬೋಧನೆ. ಅವನ ಕಣ್ಣ ಮುಂದಿದ್ದವರು ಮುಖ್ಯವಾಗಿ ಸಮಾಜದ ಕೆಳವರ್ಗದ ಜನ. ಆ ಜನರಿಗೆ ಅವರ ಭಾಷೆ ಮತ್ತು ರೀತಿಗಳಲ್ಲಿಯೇ ವಚನಕಾರರಿಗೆ ಸಮ್ಮತವಾದ ತನ್ನ ಅನುಭವಕ್ಕೆ ಸರಿಯೆಂದು ತೋರುವ ನೀತಿ ವಿವೇಕವನ್ನು ಬೋಧಿಸುವುದು ಸರ್ವಜ್ಞನ ಉದ್ದೇಶ ಈ ದೃಷ್ಟಿಯಿಂದ ಅವನು ಜನತೆಯ ಕವಿಯಾಗುತ್ತಾನೆ. ಅವನ ಕೃತಿ ನೀತಿಯ ಕಾವ್ಯವಾಗುತ್ತಾನೆ.

ಬಸವಣ್ಣನವರಿಗೂ ಸರ್ವಜ್ಞನಿಗೂ ಎದ್ದು ಕಾಣುವ ವ್ಯತ್ಯಾಸವೊಂದಿದೆ. ಬಸವಣ್ಣನವರ ನೀತಿ ಬೋಧೆಯ ಜೊತೆ ಮತ ಸಂಬಂಧಿಯಾದ ಶಾಸ್ತ್ರ ವಿವರಣೆಯೂ ಸಾಕಷ್ಟು ಪ್ರಮಾಣದಲ್ಲಿ ಬರುತ್ತದೆ. ಏಕೆಂದರೆ ಬಸವಣ್ಣ ಮತದ ಪರಿಸರದಲ್ಲಿಯೇ ಸಾಮಾಜಿಕ ಆಂದೋಲನವನ್ನು ಮಾಡಹೊರಟಿದ್ದರಿಂದ ಮತ ಪ್ರಸಾರವೂ ಅವರಿಗೆ ಅನಿವಾರ್ಯವಾಗಿತ್ತು. ಆದರೆ ಸರ್ವಜ್ಞನಿಗೆ ಮತ ಪ್ರಸಾರ ಮುಖ್ಯ ಅಲ್ಲವೇ ಅಲ್ಲ.

ಸರ್ವಜ್ಞ ಶಾಸ್ತ್ರೀಯವಾಗಿ ವೀರಶೈವ ಧರ್ಮಕ್ಕೆ ಮತಾಂತರ ಹೊಂದಿದ್ದನೇ ಎಂಬುದೇ ಸಂದೇಹಾಸ್ಪದವಾಗಿರುವಾಗ ಆ ಮತದ ಪ್ರಸಾರಕ್ಕೆ ಅವನು ಪ್ರಯತ್ನಿಸಿದನೆನ್ನುವುದು ಇನ್ನೂ ಸಂದೇಹಾಸ್ಪದವಾಗಿ ಕಾಣುತ್ತದೆ. ಸರ್ವಜ್ಞನಲ್ಲಿ ವೀರಶೈವ ಧರ್ಮ ಪರಿಭಾಷೆ ಅಲ್ಲಲ್ಲಿ ಬರುವುದೇನೋ ನಿಜ. ಅದು ತೀರಾ ಗೌಣವಾದುದು. ತನ್ನ ಸುತ್ತ–ಮುತ್ತಣ ಜೀವಿಗಳನ್ನು ವೀರಶೈವರನ್ನಾಗಿ ಮಾಡು–ವುದಕ್ಕಿಂತ ಅವರನ್ನು ಮನುಷ್ಯರನ್ನಾಗಿ ಮಾಡುವುದು ಅವನಿಗೆ ಮುಖ್ಯವಾಗಿ ಕಂಡಿತು. ಅವನಲ್ಲಿ ಇತರ ಧರ್ಮಗಳ ವಿಡಂಬನೆ ಬಂದಿದ್ದರೂ ಎಷ್ಟೋ ಕಡೆ ಅವುಗಳ ಶ್ರೇಷ್ಠತೆಯನ್ನೂ ಎತ್ತಿ ಹಿಡಿಯಲು ಹಿಂಜರಿದಿಲ್ಲ.[೧]

ಕೊಲುವ ಧರ್ಮವನೊಯ್ದು ಒಲೆಯೊಳಗಿಕ್ಕುವುದು
ಕೊಲಲಾಗದೆಂಬ ಜೈನರ ಮತವೆನ್ನ
ತಲೆಯ ಮೇಲಿರಲಿ ಸರ್ವಜ್ಞ

೧. ಸರ್ವಜ್ಞ ಒಂದು ಸಮೀಕ್ಷೆ, ಸಂ. ಜಿ.ಎಸ್.ಶಿವರುದ್ರಪ್ಪ, ಪುಟ ೧೬.

ಉಪ್ಪು ಸಪ್ಪನೆಯಕ್ಕು ಕರ್ಪೂರ ಕರಿದಕ್ಕು
ಸರ್ಪಂಗೆ ಬಾಲವೆರಡಕ್ಕು ಶ್ರವಣರು
ತಪ್ಪಿ ನುಡಿದಂದು.

ಇಲ್ಲಿಯ ತ್ರಿಪದಿಗಳಲ್ಲಿ ಜೈನ ಧರ್ಮದ ಶ್ರೇಷ್ಠತೆಯನ್ನು ಶ್ರವಣರ ಸತ್ಯ ನಿಷ್ಠೆಯನ್ನು ಕೊಂಡಾಡಿದ್ದಾನೆ. ಅದೇ ಶ್ರವಣರನ್ನು ಟೀಕಿಸಿರುವ ಪದ್ಯಗಳೂ ಆತನಲ್ಲುಂಟು. ಸರ್ವಜ್ಞ ಜೀವನವನ್ನು ಸಾಕ್ಷಿಯಾಗಿ ನೋಡಿದವನು. ಸಮಗ್ರವಾಗಿ ನೋಡಿ ದುರ್ಗುಣವನ್ನು ಕಂಡಲ್ಲಿ ಕಟುವಾಗಿ ಟೀಕಿಸಿದ್ದಾನೆ. ಉತ್ತಮವಾದದ್ದನ್ನು ಮೆಚ್ಚಿ ಹೊಗಳಿದ್ದಾನೆ. ಮತ್ತು ತಲೆಯ ಮೇಲಿಟ್ಟುಕೊಂಡು ಮೆರೆದಿದ್ದಾನೆ.

ಸರ್ವಜ್ಞನ ಆಲೋಚನಾ ವಿಧಾನವನ್ನು ರೂಪಿಸುವಲ್ಲಿ ಪ್ರಮುಖರಾದವರು ಬಸವಣ್ಣನವರು. ಬಸವಣ್ಣನವರು ಯಾವ ಹೊಸ ಮೌಲ್ಯಗಳನ್ನು ಪ್ರತಿಪಾದಿಸಿ ನೂತನ ಸಮಾಜವೊಂದರ ಕನಸನ್ನು ಕಂಡರೋ ಅದೆಲ್ಲವನ್ನು ಸರ್ವಜ್ಞ ಒಪ್ಪಿಕೊಂಡಿದ್ದಾನೆ. ಆಲೋಚನೆಯ ದೃಷ್ಟಿಯಿಂದ ವಚನಕಾರರಲ್ಲಿ ಇಲ್ಲದ್ದು ಸರ್ವಜ್ಞನಲ್ಲಿ ಏನೂ ಇಲ್ಲ. ಯಾವುದೇ ದೃಷ್ಟಿಯಿಂದ ಪರಿಶೀಲಿಸಿದರೂ ಸರ್ವಜ್ಞನ ವಚನಗಳು ಬಸವಣ್ಣನವರ ವಚನಗಳ ಮಟ್ಟಕ್ಕೆ ಏರಲಾರವು ಬಸವಣ್ಣನವರಂತೆಯೇ ಇವನೂ ಕೆಲವು ವಿಧಿ ಕರ್ಮಗಳನ್ನು ಒಪ್ಪಿದ್ದಾನೆ. ಉದಾಹರಣೆಗೆ ಇಷ್ಟಲಿಂಗ, ಪೂಜೆ, ರುದ್ರಾಕ್ಷಿಧಾರಣೆ, ಗುರುವಿನ ಸೇವೆ ಮತ್ತೆ ಬಸವಣ್ಣನವರಂತೆಯೇ ಶುದ್ಧ ಹೃದಯವಿಲ್ಲದೆ ಇವನ್ನು ಬಾಹ್ಯದಲ್ಲಿ ಆಚರಿಸುವವರ ಭಕ್ತಿಯು ವ್ಯರ್ಥವೆಂದು ಸಾರಿದ್ದಾನೆ.

ಬಸವಣ್ಣನವರಲ್ಲಿ ಬ್ರಾಹ್ಮಣ ವರ್ಗದ ಪ್ರಶಂಸೆ ಅಪ್ಪಿ–ತಪ್ಪಿಯೂ ಬರುವುದಿಲ್ಲ. ಬಸವಣ್ಣನವರು ಸಮಾಜದಲ್ಲಿ ಬೇರೆ ಬೇರೆ ಜಾತಿಗಳಲ್ಲಿರುವ ಮೇಲು–ಕೀಳುಗಳನ್ನು ಖಂಡಿಸಿದ್ದಾರೆ. ಸರ್ವಜ್ಞನಿಗೂ ಸಹ ಈ ಬಗೆಯ ಮೇಲು–ಕೀಳುಗಳನ್ನು ಟೀಕಿಸಿದ್ದಾನೆ. ಹಾರುವರೆಂಬುವ ಹಾಸುವರು ನರಕಕ್ಕೆ ಎಂದು ಒಂದು ಕಡೆ ಬ್ರಾಹ್ಮಣರನ್ನು ನಿಂದಿಸಿದರೆ ಅದೇ ಉಸಿರಿನಲ್ಲಿ ಆರೈದು ನಡೆವ ದ್ವಿಜರುಗಳ ಸಂಸರ್ಗವಾರಿಂದಲಧಿಕ ಎಂದು ಶ್ರೇಷ್ಠ ನಡತೆಯುಳ್ಳ ಬ್ರಾಹ್ಮಣರನ್ನು ಕೊಂಡಾಡಿದ್ದಾನೆ.

ಜಾತಿ ವ್ಯವಸ್ಥೆಯ ಬಗ್ಗೆ ಸರ್ವಜ್ಞ ಮಾತನಾಡುವಾಗ ಬಸವಣ್ಣನವರನ್ನು ನೆನಪಿಗೆ ತರುತ್ತಾನೆ. "..... ಶ್ವಪಚೋಪಿಯಾದಡೇನು ಶಿವಭಕ್ತಗೆ ಕುಲಜನು" ಎಂಬ ಬಸವಣ್ಣನವರ ಉಕ್ತಿಯನ್ನು ಸರ್ವಜ್ಞನ ಈ ತ್ರಿಪದಿಯೂ ಜ್ಞಾಪಕಕ್ಕೆ ಬರುತ್ತದೆ.

ಯಾತರ ಹೂವದು ನಾತರೆ ಸಾಲದೆ
ಜಾತಿ ವಿಜಾತಿಯೆನಬೇಡ ಶಿವನೊಲಿ
ದಾತನೆ ಜಾತಿ ಸರ್ವಜ್ಞ.

ಸರ್ವಜ್ಞನ ಇಡೀ ಸಾಮಾಜಿಕ ಚಿಂತನೆ ಬಸವಣ್ಣವನರಿಂದ ರೂಪಿತವಾಗಿದೆ. ಒಟ್ಟಿನಲ್ಲಿ ಸರ್ವಜ್ಞನ ಮೇಲೆ ಪರಮಾವಧಿ ಪ್ರಭಾವವನ್ನು ಬೀರವರು ಬಸವಣ್ಣನವರು. ಬಸವಣ್ಣನವರ ಭಾವಗಳು, ವಚನಗಳ ಭಾಗಗಳು, ಇಡೀ ವಚನಗಳು ಸರ್ವಜ್ಞನಲ್ಲಿ ಚೆಲ್ಲುವರಿದಿದೆ.

ಉದಾಹರಣೆಗೆ:

ಕುರಿವಿಂಡು ಕಬ್ಬಿನ ಉಲಿವ ತೋಂಟವ ಹೊಕ್ಕು
ತರನರೆಯದೆ ತನಿರಸದ
ಹೊರಗಣೆಲೆಯನೆ ಮೇದವು
ನಿಮ್ಮನರೆವ ಮದಕಿರಿಯಲ್ಲದೆ
ಕುರೆ ಬುಲ್ಲುದೆ ಕೂಡಲಸಂಗಮದೇವ.

ಬಸವಣ್ಣನವರ ಈ ವಚನ ಸರ್ವಜ್ಞನಲ್ಲಿ ಈ ಬಗೆಯಲ್ಲಿ ಮೂಡಿ ಬಂದಿದೆ.

ಕುರೆ ಕೊಬ್ಬಿನಗಳು ಹೊಕ್ಕು ಅರಿಯದೇ ತಾನಿರಸವ
ಹೊರಗಣ ಸೋಗೆಯಗಿವಂತೆ ತತ್ವದ
ಕುರಹನಾರರೆಗು ಸರ್ವಜ್ಞ.

ಬಿದಿರಲಂದಣವಕ್ಕೂ ಬಿದಿರೆ ಸತ್ತಿಗೆ ಯಕ್ಕು
ಬಿದಿರೆ ತಾ ಕೊಡಗು ಪರಪದವ ಲೋಕದೊಳು
ಬಿದಿರದಿರೆ ಕೆಡಗು ಸರ್ವಜ್ಞ.

ಬಸವಣ್ಣನವರ ಮೊದಲನೆಯ ವಚನದಲ್ಲಿ ಬಂದಿರುವ ಮದಕರಿ ಚಿತ್ರ ಸರ್ವಜ್ಞನಲ್ಲಿ ಬಿಟ್ಟು ಹೋಗಿದ್ದರೂ ನಷ್ಟವೇನಿಲ್ಲ. ಕುರಿ ಕಬ್ಬನ್ನು ತಿನ್ನಲಾರದೇ ಅದರ ಸೋಗೆಯನ್ನು ಅಗಿಯುತ್ತದೆ ಎಂಬ ಚಿತ್ರವೇ ಅಂತಹ ಕಬ್ಬನ್ನು ಸೀಳುವ ಶಕ್ತಿಯುಳ್ಳ ಆಸೆಯನ್ನು ಧ್ವನಿಸುತ್ತದೆ. ಎರಡನೆಯ ವಚನವೂ ಸರ್ವಜ್ಞನಲ್ಲಿ ಯಾವುದೇ ಭಾವವನ್ನು ಕಳೆದುಕೊಳ್ಳದೆ ಸಂಗ್ರಹವಾಗಿ ಬಂದಿರುವುದನ್ನು ಗಮನಿಸಬಹುದು. ಬಸವಣ್ಣನವರ ಉಕ್ತಿಗಳನ್ನು ಭಾವಗಳನ್ನು ಆಧರಿಸಿ ಹುಟ್ಟಿದ ತ್ರಿಪದಿಗಳು ಹತ್ತಾರಿವೆ.

ಉಣಬಂದ ಲಿಂಗಕ್ಕೆ ಉಣಲಿಕ್ಕದಂತರಿಸಿ
ಉಣದಿರ್ದ ಲಿಂಗಕ್ಕುಣ ಬಡಿಸಿ ಕೈಮುಗಿವ
ಬಣಗುಗಳ ನೋಡಾ ಸರ್ವಜ್ಞ.

ಎಂಬ ಸರ್ವಜ್ಞನ ತ್ರಿಪದಿಯ ಭಾವಕ್ಕೆ ಬಸವಣ್ಣನವರ,

ಕಲ್ಲನಾಗರ ಕಂಡಡೆ ಹಾಲನೆರೆಯೆಂಬರು
ದಿಟದ ನಾಗರ ಕಂಡಡೆ ಕೊಲ್ಲೆಂಬರಯ್ಯಾ
ಉಂಬ ಜಂಗಮ ಬಂದಡೆ ನಡೆಯಂಬೆರು
ಉಣ್ಣದ ಲಿಂಗಕ್ಕೆ ಬೋನವ ಹಿಡಿಯೆಂಬರಯ್ಯಾ
ನಮ್ಮ ಕೂಡಲಸಂಗನ ಶರಣರ ಕಂಡು ಉದಾಸೀನವ ಮಾಡಿದಡೆ
ಕಲ್ಲ ತಾಗಿದ ಮಿಟ್ಟೆಯಂತಪ್ಪರಯ್ಯಾ.

ಎಂಬ ಸುಪ್ರಸಿದ್ಧ ವಚನ ಮೂಲವೆಂಬುದು ಸ್ಪಷ್ಟ ಉಂಬ ಜಂಗಮ ಎಂಬುದರ ಬದಲು ಅದೇ ಅರ್ಥದಲ್ಲಿ ಉಣ ಬಂದ ಲಿಂಗವೆಂದು ಬಳಸಿರುವುದು ಸೊಗಸಾಗಿದೆ.

ಒಡಲದಂಡಿಸಿ ಮುಕ್ತಿ ಪಡೆವನೆಂಬುವನೆಗ್ಗ
ಬಡಿಗೆಯಂಥ ಹುತ್ತ ಹೊಡೆಯಲೊಳಗಿಹ ಸರ್ಪ
ಮಡಿವುದೇ ಹೇಳ ಸರ್ವಜ್ಞ.

ಎಂಬ ಸರ್ವಜ್ಞನ ತ್ರಿಪದಿಗೂ ಬಸವಣ್ಣನವರ ಈ ವಚನವೇ ಮೂಲ

ಹುತ್ತವ ಬಡಿದಡೆ ಹಾವು ಸಾಯಬಲ್ಲುದೆ ಅಯ್ಯಾ?
ಅಘೋರ ತಪವ ಮಾಡಿದೊಡೇನು?
ಅಂತರಂಗ ಆತ್ಮಶುದ್ಧಿಯಿಲ್ಲದವರನೆಂತು ನಂಬುವನಯ್ಯಾ
ಕೂಡಲಸಂಗಮದೇವ.

ಒಡಲನ್ನು ದಂಡಿಸಿ ಆತ್ಮ ಶುದ್ಧಿಯಾಯಿತು ಎಂದು ಭ್ರಮಿಸುವುದು ಹಾವನ್ನು ಕೊಲ್ಲಲು ಹುತ್ತವನ್ನು ಹೊಡೆದಂತೆ ಎಂಬ ಸರ್ವಜ್ಞನ ತ್ರಿಪದಿಯ ಭಾವ ಮೂಲತಃ ಬಸವಣ್ಣನವರದು.

ಸಿರಿಯ ಸಂಸಾರವು ಸ್ಥಿರವೆಂದು ನಂಬದಿರು
ಹಿರಿದೊಂದು ಸಂತೆಯ ಮಂದಿ ಜಾವಕ್ಕೆ
ಹರಿದು ಹೋಹಂತೆ ಸರ್ವಜ್ಞ.

ಎಂಬ ತ್ರಿಪದಿಯು ಬಸವಣ್ಣನವರ ಈ ವಚನದ ಭಾವವನ್ನು ಹೋಲುತ್ತದೆ.

ಸಂಸಾರವೆಂಬುದು ಗಾಳಿಯ ಸೊಡರು
ಸಿರಿಯೆಂಬುದೊಂದು ಸಂತೆಯ ಮಂದಿ ಕಂಡಯ್ಯ
ಇದ ನಚ್ಚಿ ಕೆಡಬೇಡ
ಸಿರಿಯಂಬುದ ಮರೆದು, ಪೂಜಿಸು ನಮ್ಮ ಕೂಡಲ
ಸಂಗಮದೇವನ.

ಸಂಸಾರವನ್ನು ಒಂದು ಕ್ಷಣ ನೆರೆಯುವ ಸಂತೆಗೆ ಹೋಲಿಸುವ ಉಪಮೆ ಸರ್ವಜ್ಞನಿಗೆ ಬಸವಣ್ಣನವರಿಂದ ಬಂದಿದೆ. ಸಜ್ಜನರ ಡೊಂಕು ಅನಪೇಕ್ಷಣಿಯವಾದದ್ದೇನೂ ಅಲ್ಲ ಎಂದು ಸರ್ವಜ್ಞ ಹೇಳುವಾಗ ಅವನ ಮನಸ್ಸಿನ ಹಿನ್ನೆಲೆಯಲ್ಲಿ ಕೂಡಲಸಂಗನ ಶರಣರಡೊಂಕು ಲಿಂಗಕ್ಕೆ ಸಸಿನ ಎಂಬ ಬಸವಣ್ಣನವರ ಮಾತು ಇದೆ. ಸರ್ಪನ ನೆರಳಲ್ಲಿ ವಿಶ್ರಮಿಸುತ್ತಿರುವ ಕಪ್ಪೆ, ಕೂಸುಳ್ಳ ಸೂಳೆ ಧನದ ಆಸೆಗೆ ಒತ್ತೆಗೊಂಡು ಅನುಭವಿಸುವ ಬವಣೆ, ಆಸೆಯ ಮೇಲೆ ಹೋಗುವವರನ್ನು ಕಂಡು ವ್ಯರ್ಥವಾಗಿ ನಾಯಿ ಬೊಗಳುವುದು, ಈ ಅದ್ಭುತ ಶಬ್ದ ಚಿತ್ರಗಳಿಗೆ ಮಾರು ಹೋದ ಸರ್ವಜ್ಞ ಅವನ್ನು ಬಸವಣ್ಣನವರಿಂದ ಸ್ವೀಕರಿಸುವ ಯಥೋಚಿತವಾಗಿ ಚಿತ್ರಿಸಿದ್ದಾನೆ.

ಎಷ್ಟೋ ಕಡೆ ಎರಡು ಮೂರು ವಚನಗಳ ಭಾವವನ್ನು ಒಂದು ಪದ್ಯದಲ್ಲಿ ಧ್ವನಿಸಿರುವುದುಂಟು ಸಂಕ್ಷಿಪ್ತತೆಯಿಂದಾಗಿ ಅಂತಹ ಪದ್ಯಗಳು ಹೆಚ್ಚು ಶಕ್ತಿಯನ್ನು ಗಳಿಸಿಕೊಳ್ಳುತ್ತವೆ.

ಎಲ್ಲರೂ ವೀರರು ಎಲ್ಲರೂ ಧೀರರು
ಎಲ್ಲರೂ ಮಹಿಮರು ಎಲ್ಲರೂ ಪ್ರಥಮರು
ಕಾಳೆಗದ ಮುಖದಲ್ಲಿ ಕಾಣಬಾರದು
ಈಡುವ ಮುಖದಲ್ಲಿ ಕಾಣಬಾರದು
ನಮ್ಮ ಕೂಡಲಸಂಗನ ಶರಣರು ಧೀರರು
ಉಳಿದವರೆಲ್ಲಾ ಅಧೀರರು.

ಬಸವಣ್ಣನವರ ಪ್ರಭಾವಕ್ಕೆ ಒಳಗಾಗಿ ರಚಿತವಾದ ಸರ್ವಜ್ಞನ ತ್ರಿಪದಿಗಳು ಹಲವಾರು ಸರ್ವಜ್ಞ ಬಸವಣ್ಣನವರ ಪ್ರಭಾವಕ್ಕೆ ಒಳಗಾಗಿಯೂ ತನ್ನ ಸ್ವಂತಿಕೆಯನ್ನು ಕಾಪಾಡಿಕೊಂಡಿದ್ದಾನೆ. ಎಷ್ಟೋ ಕಡೆ ಮೂಲದ ಉಕ್ತಿಯನ್ನು ತೆಗೆದುಕೊಂಡು ಉತ್ತಮವಾಗಿ ರಚಿಸಿದ್ದಕ್ಕೆ ಹಲವು ಉದಾಹರಣೆಗಳಿವೆ.

ಹೊಲೆಯೊಳಗೆ ಹುಟ್ಟಿ ಕುಲವನರಸುವ
ಎಲವೋ ಮಾತಂಗಿಯ ಮಗ ನೀನು
ಸತ್ತುದನೆಳೆವನೆತ್ತಣ ಹೊಲೆಯ?
ಹೊತ್ತು ತಂದು ನೀವು ಕೊಲುವಿರಿ
ಶಾಸ್ತ್ರವೆಂಬುದು ಹೋತಿಂಗೆ ಮಾರಿ
ವೇದವೆಂಬುದು ನಿಮಗೆ ತಿಳಿಯದು
ನಮ್ಮ ಕೂಡಲಸಂಗನ ಶರಣರು
ಕರ್ಮ ವಿರಹಿತರು, ಶರಣ ಸನ್ನಿಹಿತರು, ಅನುಪಮ
ಚರಿತ್ರರು ಅವರಿಗೆ ತೋರಲು ಪ್ರತಿಯಿಲ್ಲವೋ

ಎಂಬ ಬಸವಣ್ಣನವರ ವಚನವೊಂದರಿಂದ ಪ್ರೇರಿತವಾಗಿ

ಸತ್ತುದ ತಿಂಬಾತನೆತ್ತಣ ಹೊಲೆಯನು
ಎತ್ತಿ ಜೀವದುದ ಕೊರಳರಿದು ತಿಂಬಾತ
ನುತ್ತಮದ ಹೊಲೆಯ ಸರ್ವಜ್ಞ .

ಈ ತ್ರಿಪದಿಯನ್ನು ಬರೆದಿದ್ದಾನೆನ್ನುವುದರಲ್ಲಿ ಅನುಮಾನವಿಲ್ಲ.[೧] ಬಸವಣ್ಣನವರು ತಮ್ಮ ವಚನದಲ್ಲಿ ಬ್ರಾಹ್ಮಣರು ಯಾಗದ ನೆಪದಲ್ಲಿ ಪ್ರಾಣಿಗಳನ್ನು ಕೊಲ್ಲುವ ಪದ್ಧತಿಯನ್ನು ವಿರೋಧಿಸಿದ್ದಾರೆ. ಹೊಲೆಯ ಸತ್ತದ್ದನ್ನು ಮಾತ್ರ ತೆಗೆದುಕೊಂಡು ಹೋಗುವವನು ಎಂಬ ಬಸವಣ್ಣನವರ ಮಾತಿನ ಮೊನಚಾದ ತಿವಿತ ಸರ್ವಜ್ಞನಲ್ಲಿಯೂ ಕಾಣುತ್ತದೆ. ಸರ್ವಜ್ಞನ ಪದ್ಯದಲ್ಲಿಯೂ ಬ್ರಾಹ್ಮಣ ವರ್ಗದ ವಿಡಂಬನೆಯಿದೆಯೆಂದು ಗೊತ್ತಾಗುವುದು ಬಸವಣ್ಣನವರ ವಚನದ ಜೊತೆಗೆ ಹೋಲಿಸಿದಾಗ ಮಾತ್ರ. ಈ ಪದ್ಯ ದ್ವಿಜ ದರ್ಶನ ಪದ್ಧತಿಯಲ್ಲಿ ಬಂದಿರುವುದೂ ಅಂತಹ ಭಾವನೆಯನ್ನು ಉಂಟು ಮಾಡಬಹುದು. ಬರೀ ಪದ್ಯವನ್ನು ತೆಗೆದುಕೊಂಡಾಗ ಬದುಕಿರುವ ಪ್ರಾಣಿಗಳ ಕೊರಳು ಕೊಯ್ದು ತಿಂಬಾತ ಎನ್ನುವ ಮಾತು ಸಮಾಜವನ್ನು ವಂಚಿಸಿ ಬೇರೆಯವರ ಸುಖವನ್ನು ಬಲಿಕೊಟ್ಟು ತಮ್ಮ ಸ್ವಾರ್ಥವನ್ನು ಈಡೇರಿಸಿಕೊಳ್ಳುವ ವಂಚಕರ ಸಮೂಹಕ್ಕೆ ಅನ್ವಯಿಸಬಹುದು, ಆಗ ಇನ್ನೂ ಅರ್ಥ ವಿಶಾಲವಾಗುತ್ತದೆ. ಬಸವಣ್ಣನವರು ಕೇವಲ ಶರಣರ ಸಮೂಹಕ್ಕೆ ನಾಯಕನಾಗಿರಲಿಲ್ಲ ಜನರಿಗೆ ಕಾಯಕವನ್ನು ಕಲಿಸುವುದಕ್ಕೆ ನಾಯಕನಾಗಿದ್ದ ಕಾಯಕವು ಶರಣರ ಉಸಿರಾಗಿತ್ತು.

---

೧. ಸರ್ವಜ್ಞ ಒಂದು ಸಮೀಕ್ಷೆ; ಸಂ. ಜಿ.ಎಸ್.ಶಿವರುದ್ರಪ್ಪ, ಪುಟ ೨೭.

ಕಾಯಕದಲ್ಲಿ ತೊಡುಗುದೆಂದರೆ ಶಾರೀರಿಕ ಶ್ರಮ ಆಗುತ್ತದೆ. ಹಾಗೂ ಮನಸ್ಸಿಗೆ ಆಯಾಸವಾಗುತ್ತದೆ. ತನುಮನ ಬಳಲಿಸದೆ ಕೃಷಿ ಕೃತ್ಯ ಅಸಾಧ್ಯ. ಅದನ್ನೇ ಬಸವಣ್ಣ ಕೃಷಿ ಕೃತ್ಯ ಹಾಗೂ ಯಾವುದೇ ಕಾಯಕ ಮಾಡಿ ತನ್ನ ಉಪಜೀವನಕ್ಕೆ ಬೇಕಾದಷ್ಟು ಪಡೆದು ಉಳಿದುದ್ದನ್ನು ದಾಸೋಹಕ್ಕೆ, ಜಂಗಮಕ್ಕೆ (ಸಮಾಜಸೇವೆಗೆ) ಅರ್ಪಿಸಬೇಕು ಎಂದು ಕೇಳಿಕೊಂಡಿದ್ದಾನೆ.

ಕೃಷಿ ಕೃತ್ಯ ಕಾಯಕದಿಂದಾದಡೇನು
ತನುಮನ ಬಳಲಿಸಿ ತಂದು ದಾಸೋಹವ ಮಾಡುವ
ಪರಮ ಸದ್ಭಕ್ತನ ಪಾದವ ತೋರಯ್ಯ ಎನಗೆ
ಆದೆಂತನೆ ಆತನ ತನುಶುದ್ಧ, ಆತನ ಮನಶುದ್ಧ.
ಆತನ ನಡೆ ಶುದ್ಧ ನುಡಿಯೆಲ್ಲವು ಪಾವನವು
. . . . . . ಕೂಡಲ ಸಂಗಮದೇವಾ.

"ಕೋಟಿ ವಿದ್ಯೆಗಳಲ್ಲಿ ಮೇಟಿ ವಿದ್ಯೆಯೇ ಲೇಸು" ಎಂಬ ಸರ್ವಜ್ಞನ ಪ್ರಸಿದ್ಧ ಹೇಳಿಕೆಯನ್ನು ನಾವು ಬಲ್ಲೆವು ಇದು ಕೃಷಿಕರನ್ನು ಕುರಿತದ್ದು. ಕೃಷಿ ಒಂದು ವೃತ್ತಿ. ಸಾಮಾನ್ಯವಾಗಿ ಕರ್ನಾಟಕದಲ್ಲಿ ಕೃಷಿಕರನ್ನು ಒಕ್ಕಲಿಗ ಎನ್ನುತ್ತಾರೆ. ವ್ಯವಸಾಯವನ್ನು ಕುರಿತು ಸರ್ವಜ್ಞ ನಾಲ್ಕಾರು ವಚನಗಳಲ್ಲಿ ಪ್ರಸ್ತಾಪಿಸಿದ್ದಾನೆ. ಕೃಷಿ ಚಟುವಟಿಕೆ ಕೃಷಿ ಜ್ಞಾನ ವಿದ್ಯೆಗಳಲ್ಲಿ ಶ್ರೇಷ್ಠವೆಂಬುದು ಅವನ ಗ್ರಹಿಕೆ.

ಎತ್ತೊಮ್ಮೆ ಹೂಡುವುದು, ಉತ್ತೊಮ್ಮೆ ಹರಗುವುದು
ಬಿತ್ತೊಮ್ಮೆ ಹಾಗಿ ಕಳೆದರಾ ಬೆಳೆಯು
ಎತ್ತಗೈ ಯುದ್ಧ ಸರ್ವಜ್ಞ.

ಕೃಷಿಕರಿಗೆ ಉಪಯುಕ್ತ ಸಲಹೆ ಕೊಡುತ್ತಿದ್ದಾನೆ. ಎತ್ತು, ಎಮ್ಮೆ ಹೂಡುವುದು, ಉಳುವುದು, ಹರಗುವುದು–ಈ ಕೃಷಿ ಸಂಬಂಧ ಶಬ್ದಗಳನ್ನು ಗಮನಿಸಬೇಕು. ಸದಾ ಕೃಷಿಕರ್ಮದಲ್ಲಿ ನಿರತನಾಗಿರಬೇಕು ಎಂದು ಸೂಚನೆ ಕೊಟ್ಟಿದ್ದಾನೆ. ಒಕ್ಕಲಿಗನ ಕುಟುಂಬ ಇದ್ದರೆ ವ್ಯವಸಾಯ, ವ್ಯವಸಾಯ ವೃದ್ಧಿಯಾದರೆ ಇತರ ಚಟುವಟಿಕೆಗಳು ವ್ಯಾಪಾರ, ವ್ಯವಹಾರ ಹೀಗೆ ಬದುಕಿನ ಚಕ್ರ ಚಲಿಸುತ್ತದೆ ಎಂದು ಹೇಳಿದ್ದಾನೆ.

ಆಧ್ಯಾತ್ಮವಾದಿಗಳು ಹೆಣ್ಣು–ಹೊನ್ನು–ಮಣ್ಣು ಈ ಮೂರರ ಹಿಡಿತದಿಂದ ದೂರವಿರಬೇಕೆಂದು, ಅದರಿಂದಲೇ ಆತ್ಮೋನ್ನತಿ ಸಾಧ್ಯವೆಂದೂ ಹೇಳಿದ್ದಾರೆ ಹಾಗೆ ಬಸವಣ್ಣನವರು ಕೂಡ ಈ ವಚನದಲ್ಲಿ ಹೇಳಿದ್ದಾರೆ.

ಹರಿವ ಹಾವಿಗಂಜೆ! ಉರಿವ ನಾಲಗೆಗಂಜೆ!
ಸುರಗಿಯ ಮೊನೆಗಂಜೆ!
ಒಂದಕ್ಕುಂಜುವೆನೊಂದಕ್ಕಳುಕುವೆ!
ಪರಸ್ತ್ರೀ–ಪರಧನವೆಂಬೀ ಜೂಬಿಂಗಂಜುವೆ
ಮುನ್ನಂಜದ ರಾವಣನೇವಿಧಿಯಾದ!
ಅಂಜುವೆನಯ್ಯಾ ಕೂಡಲಸಂಗಮದೇವ!

ಹೆಡೆಯೆತ್ತಿ ಸುರುಳಿ ಬಿಚ್ಚಿ ಸರಸರ ಹರಿದು ಬರುವ ದುರುಳಸರ್ಪಕ್ಕಂಜುವುದಿಲ್ಲ. ಏಳೆಳೆಯ ಉರಿಯ ನಾಲಗೆ ಚಾಚಿ, ಸುತ್ತಮುತ್ತ ಬರುವ ಮಹಾದಾವಾಗ್ನಿ ಜ್ವಾಲೆಗಂಜುವುದಿಲ್ಲ, ಪರಸ್ತ್ರೀ–ಪರಧನವೆಂಬೊಂದು ಘೋರ ಪಾಪಕ್ಕಲ್ಲದೆ ಮತ್ತಾವುದಕ್ಕೂ ಅಂಜುವುದಿಲ್ಲ. ಪ್ರಾಣವನ್ನು ಮಾನದ ಅನುಪಾನದೊಡದೆ ಆಪೋಶಗೊಳ್ಳುವ ಅನ್ಯಕಾಮಿನೀಕಾಂಚನಗಳ ನಂಜಿನ ಉರಿಮೊನೆಗೆ ತೀರ ಅಂಜುವೆ? ಎಂದು ಹೇಳಿದ್ದಾರೆ.

ಹೊನ್ನು ಎಂಬ ಶಬ್ದ ಕೇಳಿದಾಕ್ಷಣ ಯತಿ, ಸತಿ, ಸಿರಿವಂತ – ಮೂವರು ಭ್ರಮಿತರಾಗುತ್ತಾರೆ. ಅಂದರೆ ವಶವಾಗುತ್ತಾರೆ. ಅದಕ್ಕೆ ದಾಸರಾಗುತ್ತಾರೆ, ಹುಚ್ಚ–ರಾಗುತ್ತಾರೆ.

ವಚನದೊಳಗೆಲ್ಲವರು ಶುಚಿ, ವೀರ, ಸಾಧುಗಳು
ಕುಚ, ಶಸ್ತ್ರ, ಹೇಯ ಸೋಂಕಿದರೆ ಲೋಕದೊಳ
ಗಚಲದವರಾರು ಸರ್ವಜ್ಞ.

ತಾನು ಶೀಲವಂತ ಎಂದುಕೊಳ್ಳುತ್ತಾನೆ. ತಾನು ವೀರ ಎಂದುಕೊಳ್ಳುತ್ತಾನೆ, ತಾನು ಸನ್ಯಾಸಿ ಎಂದುಕೊಳ್ಳುತ್ತಾನೆ. ಕ್ರಮ ಕುಚ ಶಸ್ತ್ರ ಹೇಯಗಳ ಸ್ಪರ್ಶಕ್ಕೆ ಅಲ್ಲಾಡಿ ಹೋಗುತ್ತಾರೆ.

ಹೆಣ್ಣನ್ನು ಹೊನ್ನನ್ನು ಹಣ್ಣಾದ ಮರಗಳನ್ನು
ಕಣ್ಣಿನಲಿ ಕಂಡು ಮನದಲ್ಲಿ ಬಯಸದಿಹ
ಅಣ್ಣಗಳು ಯಾರು ಸರ್ವಜ್ಞ.

ಹೊನ್ನು ಅಥವಾ ಹಣದ ಪ್ರಭಾವ ಅಥವಾ ಶಕ್ತಿ ಎಂಥದ್ದು ಅಂದರೆ ಅದು ತಾನು ಮುಂದೆ ನಿಲ್ಲುತ್ತದೆ. ನಮ್ಮವರನ್ನು ಮರೆಯುವಂತೆ ಮಾಡುತ್ತದೆ. ಬೇರೆಯಾರನ್ನು ಸ್ತುತಿಸುವಂತೆ ಮಾಡುತ್ತದೆ ಎಂದು ಹೇಳಿದ್ದಾನೆ.

ಮತ್ತೊಂದು ಬಸವಣ್ಣನವರು ನಡೆ-ನುಡಿಗಳ ಬಗ್ಗೆ ಹೇಳಿದ್ದಾನೆ.

ಏನಿಬಂದಿರಿ ಹದುಳಿದ್ದಿರೆಂದರೆ
ನಿಮ್ಮ ಮೈಸಿರಿ ದಾರಿ ಹೋಹುದೇ?
ಕುಳ್ಳಿರೆಂದರೆ ನೆಲ ಕುಳಿಹೋಹುದೇ?
ಒಡನೆ ನುಡಿದರೆ ಶಿರ-ಹೊಟ್ಟೆಯೊಡೆವುದೇ?
ಕೂಡಲಿಲ್ಲದಿದ್ದರೊಂದು ಗುಣವಿಲ್ಲದಿದ್ದರೆ
ತಡಗೆಡಹಿ ಮೂಗ ಕೊಯ್ಯದೆ ಮಾಬನೆ
ಕೂಡಲಸಂಗಮದೇವಾ.

ಕೂಡಲು ಚೈತನ್ಯವಿಲ್ಲದಿರಬಹುದು ಅಥವಾ ಔದಾರ್ಯವಿಲ್ಲದಿರಬಹುದು ಆದರೆ ನಮ್ಮಲ್ಲಿ ತಮ್ಮ ಕಷ್ಟಗಳನ್ನು ತೋಡಿಕೊಂಡು ಹೃದಯಭಾರವನ್ನಿಳಿಸಿಕೊಳ್ಳಲು ಬಂದ ನೊಂದ ಸಹ ಜೀವಿಗಳಿಗೆ ಸಹಾಯನುಭೂತಿಯನ್ನು ಸೂಚಿಸಿ, ಸಂತೈಕೆಯ ಮಾತೊಂದಾಡಲು ಬಂದ ಬರವೇನು? ಕೊಡಲು ಇಲ್ಲದಿದ್ದರೇನು? ಕೊಡದಿದ್ದರೇನು? ಗುಣವಿಲ್ಲ-ದಿದ್ದರೆ ಅಂತಹವನನ್ನು ದೇವರು ಕೆಳಕ್ಕೆ ಕುಕ್ಕಿ ಕೊರಳು ಮೆಟ್ಟಿ, ಮೂಗನ್ನು ಕೊಯಾದೆ ಬಿಡನು ಎಂದಿದ್ದಾರೆ.

ಬರಕಂಡು ಕರೆಯದವನ ಇರೆಕುಳ್ಳಿರೆನ್ನದನ
ಸರಸ ಸಜ್ಜನಿಕೆ ಇಲ್ಲದವನ ಸುಖತನವ
ಬೆರೆಸಲೇಬೇಡ ಸರ್ವಜ್ಞ .

ಎಂದು ಮತ್ತೊಂದು ಕಡೆ ಸರ್ವಜ್ಞ ಹೇಳಿದ್ದಾನೆ.

ಅರ್ಥರೇಖೆಯಿದ್ದಲ್ಲಿ ಫಲವೇನು?
ಆಯಷ್ಯರೇಖೆಯಿಲ್ಲ ದನ್ನಕ್ಕ
ಹಂದೆಯ ಕೈಯಲ್ಲಿ ಚಂದ್ರಾಯುಧವಿದ್ದು ಫಲವೇನು
ಅಂಧಕನ ಕೈಯಲ್ಲಿ ದರ್ಪಣವಿದ್ದು ಫಲವೇನು?
ಮರ್ಕಟನ ಕೈಯಲ್ಲಿ ಮಾಣಿಕ್ಯವಿದ್ದು ಫಲವೇನು?
ನಮ್ಮ ಕೂಡಲ ಸಂಗನ ಶರಣರನರಿಯದವರ ಕೈಯಲ್ಲಿ
ಲಿಂಗವಿದ್ದು ಫಲವೇನು-ಶಿವಪಥವನರಿಯದನ್ನಕ್ಕ.

ನಮ್ಮ ಅಂಗೈಯಲ್ಲಿ ಧನರೇಖೆ ಎಷ್ಟು ನಿಡಿದಾಗಿದ್ದರೇನು ಬಂತು ಆ ಐಶ್ವರ್ಯವನ್ನು ಅನುಭವಿಸುವ ಆಯುಷ್ಯರೇಖೆಯಿಲ್ಲದ ಮೇಲೆ' ಹೇಡಿಯ ಕೈಯಲ್ಲಿ ಎಂತಹ

ಝುಗಝುಗಿಸುವ ಖಡ್ಗವಿದ್ದರೇನು ಬಂತು ಅದನ್ನು ಬಳಸುವ ಶಕ್ತಿ ಸಾಮರ್ಥ್ಯ ಅವನ ಕೈಯಲ್ಲಿಲ್ಲದ ಮೇಲೆ? ಕುರುಡನ ಕೈಯಲ್ಲಿ ಕನ್ನಡಿಯಿದ್ದರೇನು ಬಂತು ಅವನಲ್ಲಿ ತನ್ನ ಪ್ರತಿಬಿಂಬವನ್ನು ಕಾಣುವ ಕಣ್ಣಿಲ್ಲದ ಮೇಲೆ ಕೋತಿಯ ಕೈಯಲ್ಲಿ ಅನರ್ಘ್ಯವಾದ ರತ್ನವಿದ್ದರೇನು ಬಂತು ಅದನ್ನು ಕಣ್ತುಂಬ ನೋಡಿ ಅವರ ಅನರ್ಘ್ಯತೆಯನ್ನು ಮನಗಾಣುವ ನಿಶ್ಚಂಚಲ ಸಾವಧಾನ ಮನಸ್ಸು ಅದಕ್ಕಿಲ್ಲದ ಮೇಲೆ. ಹಾಗೆಯೇ ಇಲ್ಲದಿದ್ದರೆ ಅವನು ಕೈಯಲ್ಲಿ ಹಿಡಿದ ಲಿಂಗವು ಕೋತಿಯ ಕೈಯ ಮಾಣಿಕ್ಯದಂತೆ ಹಲ್ಲಿಗಿಂತ ಕಡೆಯೆನಿಸುವುದು ಕೈಯಲ್ಲಿ ಲಿಂಗ ಹಿಡಿದವನು ಹಸನಾದ ಬಾಳನ್ನು ನಡೆಸಬೇಕು ಎಂದು ಬಸವಣ್ಣ ಹೇಳಿದ್ದಾನೆ.

ಹಲವನೋದಿದಡೇನು? ಚೆಲುವ ನಾದಡೇನು?
ಕುಲವೀರನೆನಿಸಿ ಫಲವೇನು, ಲಿಂಗದ
ಒಲುಮೆ ಇಲ್ಲದಲೆ ಸರ್ವಜ್ಞ!

ಶಿಕ್ಷಣ, ಓದು, ಪಾಂಡಿತ್ಯ ಸಂಪಾದನೆಯ ಉದ್ದೇಶ, ಹಾಗೆಯೇ ಪ್ರಕೃತಿದತ್ತವಾದ ರೂಪ ತನ್ನ ಸಮುದಾಯದ ನಾಯಕ ಮಣಿಯಾಗಿ ನೇತಾರನಾಗಿ ಮೇಲೆರಲು ಮಾಡಿದ ಪ್ರಯತ್ನ ಎಲ್ಲವೂ ಲಿಂಗಾಂಗ ಸಾಮರಸ್ಯವನ್ನು ಸಾಧಿಸುವ ಶ್ರದ್ಧಾನೋದ್ದೇಶಕ್ಕೆ ಸಹಕಾರಿ ಎಂದು ಸರ್ವಜ್ಞ ಹೇಳಿದ್ದಾನೆ.

ಉಳ್ಳವರು ಶಿವಾಲಯವ ಮಾಡುವರು
ನಾನೇನ ಮಾಡುವೆ ಬಡವನಯ್ಯ
ಎನ್ನ ಕಾಲೇ ಕಂಭ! ದೇಹವೇ ದೇಗುಲ
ಶಿರಹೊನ್ನ ಕಳಶವಯ್ಯ
ಕೂಡಲಸಂಗಮದೇವಾ ಕೇಳಯ್ಯಾ.

ಶಿವಭಕ್ತಿಯನ್ನು ಸಾರಲು ಕೈಲಾಸ ಪರ್ವತ ಸ್ಪರ್ಧಿಯಾಗಿ ಕಟ್ಟಿಸಿದ ಮೂಕ ನಿಶ್ಚೇಷ್ಟ ಶಿವಾಲಯಗಳು ಇಂದಿದ್ದು ನಾಳೆ ಕುಸಿಯಬಹುದು. ಆದರೆ ಭದ್ರೇಚ್ಛೆಯ ಮಂಗಳಾಕಾಂಕ್ಷೆಯ ಶಿವಜೀವಸಂತಾನ ನಿರ್ಮಿತವಾದರೆ, ಅವು ತಮ್ಮ ನುಡಿವಳಿಯಲ್ಲಿ ಮತ್ತು ನಡೆವಳಿಯಲ್ಲಿ ಶಿವಸಂದೇಶವನ್ನು ಆಚರಿಸಿ ತೋರಿ ಸಂತತಿಯಾಗಿ ಸಂತತವಾಗಿರುವುವು. ಈ ಸಂತಸಂತತಿಯ ನಿರ್ಮಾಣದ ಕಡೆಗೆ ನಮ್ಮ ಅವಧಾರಣೆ ಯಿರಬೇಕೆಂಬುದು ಬಸವಣ್ಣನವರ ಆಶಯ ದೇವಾಲಯ ನಿರ್ಮಾಣ ಬಹಿಸ್ಸಂಪತ್ತನ್ನು ಅವಲಂಬಿಸಿದರೆ, ಸಂತನಿರ್ಮಾಣ ಅಂತಸ್ಸಂಪತ್ತಿಯನ್ನು ಅವಲಂಬಿಸಿದೆ.

ಮೊದಲನೆಯದು ಧನವ್ಯಯಮಾತ್ರ ಸಾಧ್ಯವಾಗಿರುವುದರ ಜೊತೆಗೆ ಅಶಾತ್ವತವೂ ಹೌದು! ಎರಡನೆಯದೋ ಮನವ್ಯಯ ಮಾತ್ರ ಎಂದು ಬಸವಣ್ಣನವರು ಹೇಳುತ್ತಾರೆ.

ಮನದಲ್ಲಿ ನೆನೆವಂಗೆ! ಮನೆಯೇನು ಮಠವೇನು।
ಮನದಲ್ಲಿ ನೆನೆಯದಿರುವವನು ದೇಗುಲದ
ಕೊನೆಯಲಿದ್ದೇನು ಸರ್ವಜ್ಞ
ಮನೆಯೇನು ವನವೇನು ನೆನಹು ಇದ್ದರೆ ಸಾಕು
ಮನಮುಟ್ಟಿ ಶಿವನ ನೆನಯದನು ಬೆಟ್ಟದ
ಕೊನೆಯಲ್ಲಿದ್ದೇನು? ಸರ್ವಜ್ಞ .

ದೇಹ ದೇವಾಲಯವು ಜೀವವೇ ಶಿವಲಿಂಗ
ಜಾಹ್ಯಂಗಳಳಿದು ಭಜಿಪಂಗೆ ಮುಕ್ತಿ ಸಂ
ದೇಹವಿಲ್ಲೆಂದ ಸರ್ವಜ್ಞ .

ಅಂತರಂಗದ ಭಕ್ತಿಯೇ ಶ್ರೇಷ್ಠ ಎಂದು ಸರ್ವಜ್ಞ ಹೇಳಿದ್ದಾನೆ.

ದೇವಲೋಕ–ಮತ್ಸ್ಯಲೋಕವೆಂಬುದು ಬೇರಿಲ್ಲ ಕಾಣಿರಣ್ಣ
ಸತ್ಯವ ನುಡಿವುದೇ ದೇವಲೋಕ
ಮಿಥ್ಯವ ನುಡಿವುದೇ ಮರ್ತ್ಸಲೋಕ
ಆಚಾರವೇ ಸ್ವರ್ಗ
ನೀವೇ ಪ್ರಮಾಣು ಕೂಡಲಸಂಗಮದೇವ!

ದೇವ ಲೋಕವೆಂಬುದು ಆಕಾಶದಲ್ಲೆಲ್ಲೂ ಇಲ್ಲ ಅದಿರುವುದು ಈ ನೆಲದ ಮೇಲೇ ಸತ್ಯವನ್ನು ಬಳಸಿದರೆ ಆ ಸುತ್ತಮುತ್ತೆಲ್ಲ ದೇವಲೋಕವಾಗಿ ಮಾರ್ಪಡುವುದು ಎಂದಿನಂತೆ ಮಿಥ್ಯಾಚಾರವನ್ನೇ ಮುಂದುವರಿಸಿದರೆ ನಾವು ನಿಂತ ಹೊಲ ಮೇರೆಯೆಲ್ಲ ಅದೇ ಮರ್ತ್ಯಲೋಕವಾಗಿ ಉಳಿದಿರುವುದು ಸ್ವರ್ಗ–ನರಕಗಳ ಮಾತಾದರೂ ಅಷ್ಟೇ, ಅನಾಚಾರದಿಂದ ಈ ನೆಲವೇ ಪ್ರತಿಯೊಬ್ಬರೂ ಈ ಭೂಲೋಕದಲ್ಲಿ ತಮ್ಮ ತಮ್ಮ ಪರಧಿಯಷ್ಟು ಪ್ರದೇಶವನ್ನಾದರೂ ಸತ್ಯದಿಂದ ಸದಾಚಾರದಿಂದ ದೇವಲೋಕವಾಗಿಸ ಬೇಕು, ಸ್ವರ್ಗವಾಗಿಸಬೇಕು.

ಸತ್ಯವೆಂಬುದು ತಾನು ನಿತ್ಯದಲಿ ಮೆರೆದಿಹುದು
ಮಿಥ್ಯಸತ್ಯವನು ಬೆರೆದರೂ ಇಹಪರದಿ
ಸತ್ಯಕ್ಕೆ ಜಯವು ಸರ್ವಜ್ಞ .

ಬತ್ತಿಯಣ್ಣೆಗಳೆರಡು ಹೊತ್ತಿ ಬೆಳಗುವ ತೆರದಿ
ಸತ್ಯ ನೀತಿಗಳು ಬೆಳಗಿಹವು ಜೋಡಗಲೆ
ಕತ್ತಲಿಜಗವು ಸರ್ವಜ್ಞ .

ಸತ್ಯ ನಿಷ್ಠೆತೆಯ ಬಗ್ಗೆ ಸರ್ವಜ್ಞ ಹೇಳಿದ್ದಾನೆ.

ಜ್ಞಾನದ ಬಲದಿಂದ ಅಜ್ಞಾನದ ಕೇಡು ನೋಡಯ್ಯ
ಜ್ಯೋತಿಯ ಬಲದಿಂದ ತಮಂಧದ ಕೇಡು ನೋಡಯ್ಯ
ಸತ್ಯದ ಬಲದಿಂದ ಅಸತ್ಯದ ಕೇಡು ನೋಡಯ್ಯ
ಪರುಷದ ಬಲದಿಂದ ಅವಲೋಹದ ಕೇಡು ನೋಡಯ್ಯ
ಕೂಡಲ ಸಂಗನ ಶರಣರ ಅನುಭಾವದಿಂದ
ಎನ್ನ ಭವದ ಕೇಡು ನೋಡಯ್ಯ.

ಬೆಳಕಿನ ಬಲದಿಂದ ಕತ್ತಲೆಯು ಕೆಟ್ಟೋಡುವಂತೆ, ತಿಳಿವಿನ ಬಲದಿಂದ ಅಜ್ಞಾನವು ಹರಿಯುವುದು ಸ್ಪರ್ಶಮಣಿಯ ಸೊಂಕಿನ ಬಲದಿಂದ ಕಬ್ಬಿಣ ಮುಂತಾದವುಗಳ ಅವಲೋಹತ್ವ ಹಾಳಾಗುವಂತೆ ಸತ್ಯದ ಬಲದಿಂದ ಸತ್ಯದ ಹಾವಳಿ ಹುಟ್ಟಡಗುವುದು ಹಾಗೆಯೇ ಶರಣರೊಡನೆ ನಡೆಸುವ ಸಂಭಾಷಣೆ ಮತ್ತು ಸತ್ಪ್ರಸಂಗಗಳ ಬಲದಿಂದ ನಮ್ಮ ಜ್ಞಾನ ಅಡಗಿ ಸುಜ್ಞಾನ ಸೆಲೆದೋರಿ ಹುಟ್ಟು ಸಾವುಗಳ ಬವಣೆ ಬತ್ತುವುದು.

ಜ್ಞಾನದಿಂ ಮೇಲಿಲ್ಲ ಶ್ವಾನನಿಂದ ಕೀಳಿಲ್ಲ
ಭಾನುವಿಂದಧಿಕ ಬೆಳಗಿಲ್ಲ, ಜಗದೊಳಗೆ
ಜ್ಞಾನವೇ ಮಿಗಿಲು! ಸರ್ವಜ್ಞ .

ಜ್ಞಾನದಿಂದಲಿ ಇಹವು ಜ್ಞಾನದಿಂದಲಿ ಪರವು
ಜ್ಞಾನವಿಲ್ಲದಿರೆ ಸಕಲವೂ ತನಗಿದ್ದು
ಹಾನಿ ಕಾಣಯ್ಯ ಸರ್ವಜ್ಞ .

ಜ್ಞಾನವೇ ಉತ್ತಮ ಎಂದು ಸರ್ವಜ್ಞ ಹೇಳಿದ್ದಾನೆ.

ದೇವನೊಬ್ಬ ನಾಮ ಹಲವು;
ಪರಮಪತಿವ್ರತೆಗೆ ಗಂಡನೊಬ್ಬ
ಮತ್ತೊಂದಕ್ಕೆರಗಿದಡೆ ಕಿವಿ–ಮೂಗ ಕೊಯ್ಯಾವನು!
ಹಲವು ದೈವದ ಎಂಜಲ ತಿಂಬವರನೇನೆಂಬೆ
ಕೂಡಲಸಂಗಮದೇವಾ.

ಏಕದೇವತಾ ಉಪಾಸನೆಯನ್ನು ಕುರಿತು ಹೇಳುವ ಪ್ರಸಿದ್ಧ ವಚನ

"ಏಕಂ ಸತ್ ವಿಪ್ರಾ ಬಹುಧಾವದಂತಿ" ಎನ್ನುವ ಮಾತಿಗೆ ಸಂವಾದಿಯಾಗಿದೆ. ಇಲ್ಲಿ ಬರುವ ಮೊದಲ ಮಾತು. ಹಾಗೆ ಒಪ್ಪಿಕೊಂಡ ದೇವರಲ್ಲಿ ಏಕೈಕ ನಿಷ್ಠೆ ಇರಬೇಕೆಂಬುದನ್ನು 'ಪರಮ ಪತಿವ್ರತೆಗೆ ಗಂಡನೊಬ್ಬ" ಎನ್ನುವ ಮಾತು ಮನದಟ್ಟು ಮಾಡಿಕೊಡುತ್ತದೆ. ಮುಂದೆ ಬರುವ ಹಲವು ದೈವದ ಎಂಜಲ ತಿನ್ನಬಾರದು ಎನ್ನುವ ಮಾತು ನೇರವಾಗಿ ಮನಸ್ಸನ್ನು ಮೆಟ್ಟಿ ನಿಷ್ಠೆಯನ್ನು ಗಟ್ಟಿಗೊಳಿಸುವಂತಿದೆ. ಸಾಧಕನ ನಿಷ್ಠೆ ಹರಿದು ಹಂಚಿ ಹೋಗದೆ ಏಕದೇವರ ಮೇಲೆ ಅಚಲವಾಗಿ ಬೆಳೆಯಬೇಕೆಂಬ ವ್ಯಾಪಕ ದೃಷ್ಟಿಯಿಂದ ನೋಡಿದಾಗ ಇದು ಸರ್ವಸಮ್ಮತವಾದ ಸಾಧನೆಯ ಸನ್ಮಾರ್ಗ ವಾಗುತ್ತದೆ.

ಒಬ್ಬನಲ್ಲದೆ, ಜಗಕೆ ಇಬ್ಬರುಂಟೇ? ಮತ್ತೆ|
ಒಬ್ಬ ಸರ್ವಜ್ಞ ಕರ್ತನೀ ಜಗಕೆಲ್ಲ
ಒಬ್ಬನೆ ದೈವ ಸರ್ವಜ್ಞ.

ಆ ದೇವ ಈ ದೇವ ಮಾದೇವ ನೆನೆಬೇಡ
ಆ ದೇವರ ದೇವ ಭುವನದ ಪ್ರಾಣಿಗಳಿಗಾದವನೆ
ದೇವ ಸರ್ವಜ್ಞ.

ಒಬ್ಬನೇ ದೇವರು ಎಂದು ಸರ್ವಜ್ಞ ಹೇಳಿದ್ದಾನೆ.

ಮಾತು ಹೇಗಿರಬೇಕು ಮತ್ತು ಮಾತಿನ ಮಹತ್ವವನ್ನು ಕುರಿತು ಬಸವಣ್ಣನವರು ಹೀಗೆ ಹೇಳುತ್ತಾರೆ.

ನುಡಿದಡೆ ಮುತ್ತಿನ ಹಾರದಂತಿರಬೇಕು
ನುಡಿದಡೆ ಮಾಣಿಕ್ಯದ ದೀಪ್ತಿಯಂತಿರಬೇಕು
ನುಡಿದಡೆ ಸ್ಫಟಿಕದ ಸಲಾಕೆಯಂತಿರಬೇಕು
ನುಡಿದಡೆ ಲಿಂಗ ಮಟ್ಟಿ ಅಹುದಹುದೆನಬೇಕು
ನುಡಿಯೊಳಗಾಗಿ ನಡೆಯುದಿದ್ದಡೆ
ಕೂಡಲಸಂಗಮದೇವನೆಂತೊಲಿವನಯ್ಯಾ?

ಆಡುವ ಮಾತು ಅಂತರಂಗದ ಆಳದಿಂದ ಮೂಡಿ ಬರಬೇಕು, ಕೇಳುಗರ ಮನವನ್ನು ಮುಟ್ಟಿ ಅರಳಿಸುವಂತಿರಬೇಕು ಎಂಬುದನ್ನು ಕೆಲವು ಸಾದೃಶ್ಯಗಳಿಂದ ಸಾಧಿಸಿದ್ದಾರೆ. ಮೊದಲನೆಯದು ಮುತ್ತಿನ ಹಾರ, ಅದು ಹೇಗೆ ಓರಣವಾಗಿದ್ದು ಎಲ್ಲರನ್ನು

ಆಕರ್ಷಿಸುತ್ತದೆಯೋ ಹಾಗೆ ಮಾತು ನೇರವಾಗಿದ್ದು ಮುತ್ತಿನಂತೆ ಹೊಳೆಯುತ್ತ ಮೂಡಿಬರಬೇಕು. ಆ ಮಾತಿನಲ್ಲಿ ಮುತ್ತಿನ ಹೊಳಪಿನ ಜೊತೆಗೆ ಮಾಣಿಕ್ಯದ ದೀಪ್ತಿಯೂ ಪ್ರಜ್ವಲಿಸಬೇಕು. ಅಂದರೆ ಮೃದು ಮಧುರತೆಯ ಜೊತೆಗೆ ಆಳವಾದ ಅನುಭವದ ರತ್ನಕಾಂತಿಯೂ ಸೇರಬೇಕು. ಒಳ ಹೊರಗು ಒಂದಾದ ನೇರ ನಡೆನುಡಿಗಳಿಂದ ಮೂಡಿ ಬರಬೇಕು. ಒಳಗೊಂದು ಹೊರಗೊಂದಾಗಿ ತೋರಿಕೆಯ ಕೃತಕ ಪ್ರದರ್ಶನವಾಗಬಾರದು. ಆಡುವ ಮಾತು ಕೇವಲ ಜನಮೆಚ್ಚುಗೆಗಾಗಿಯಲ್ಲ ಅಂತರಂಗದೊಳಗಿರುವ ಲಿಂಗವೂ ಮೆಚ್ಚುವಂತಿರಬೇಕು.

ಮಾತಿನಿಂ ನಗೆನುಡಿಯು ಮಾತಿನಿಂ ಹಗೆ ಕೊಲೆಯು
ಮಾತಿನಿಂ ಸರ್ವ ಸಂಪದವು ಲೋಕಕ್ಕೆ
ಮಾತೆ ಮಾಣಿಕ್ಯವು ಸರ್ವಜ್ಞ,

ರಸಿಕನಾಡಿದ ಮಾತು ಶಶಿಯುದಿಸಿ ಬಂದಂತೆ
ರಸಿಕನಲ್ಲದವನ ಬರಿ ಮಾತು ಕಿವಿಗೆ ಕೂರ್
ದಸಿಯು ಬಡಿದಂತೆ ಸರ್ವಜ್ಞ .

ಎಂದು ಈ ರೀಯಾಗಿ ಹೇಳಿದ್ದಾನೆ.

ಜಾತಿವೀರರು ಸಾವ ಭೀತಿಗಂಜುಳಿವರೇ
'ಜಾಸತ್ಯ ಮರಣಂಧ್ರುವಮೆಂದು' ಇರುತಿರಲು
ಏತಕಂಜುವದು? ಸರ್ವಜ್ಞ,

ಅಮ್ಮ ನಾಡಿರಿಯುವದು ಬೊಮ್ಮನಾಡದೆ ಏನು
ಅಮ್ಮದೊಡೆ ಇರಿದು ಕೆಡಬೇಡ! ಕಲಿಗೆ ತಾ
ನಿಮ್ಮೆ ಸಾವುಂಟೆ? ಸರ್ವಜ್ಞ .

ಮನೋ ದೌರ್ಬಲ್ಯವಿಲ್ಲದ ಉತ್ಸಾಹಭರಿತ ಕ್ರಿಯಾಶೀಲ ನಿರ್ಭೀತ ಜೀವನ ನಿಷ್ಠೆಯನ್ನು ಇಲ್ಲಿ ಕಾಣಬಹುದು.

ನಾಳೆ ಬಪ್ಪುದು ನಮಗಿಂದೆ ಬರಲಿ;
ಇಂದು ಬಪ್ಪುದು ನಮಗೀಗಲೆ ಬರಲಿ
ಇದಕಾರಂಜುವರು, ಇದಕಾರಳೂಡುವರು?
"ಜಾತಸ್ಯ ಮರಣಂಧ್ರುವಂ" ಎಂದುದಾಗಿ
ನಮ್ಮ ಕೂಡಲ ಸಂಗಮದೇವರು ಬರೆದ ಬರೆಹವ ತಪ್ಪಿಸುವಡೆ
ಹರಿಬ್ರಹ್ಮಾದಿಗಳಿಗಳವಲ್ಲ!

ಜೀವನದಲ್ಲಿ ಬರುವ ಕಷ್ಟಗಳನ್ನು ಎದುರಿಸಬೇಕು ಅಷ್ಟೇ ಅಲ್ಲ ನಾಳೆ ಬರುವುದು ಇಂದೇ ಬರಲಿ ಇಂದು ಬರುವುದು ಈಗಲೇ ಬರಲಿ ಎಂದು ಅವುಗಳನ್ನು ಸ್ವಾಗತಿಸಬೇಕು, ಅವುಗಳಿಗೆ ದೈಹಿಕವಾಗಿ ಅಂಜುವುದಾಗಲಿ ಮಾನಸಿಕವಾಗಿ ಅಳುಕುವುದಾಗಲಿ ಸಲ್ಲದು. 'ಹುಟ್ಟಿದವರಿಗೆ ಮರಣ ತಪ್ಪಿದ್ದಲ್ಲ' ಎಂಬ ಪ್ರಸಿದ್ಧವಾದ ಮಾತನ್ನು ಉದಾಹರಿಸುತ್ತಾ ವಚನದ ಕೊನೆಯಲ್ಲಿ ಹೇಳುವ ಕೂಡಲಸಂಗಮದೇವ ಬರೆದ ಬರಹವನ್ನು ಯಾರನ್ನು ತಪ್ಪಿಸಲಾರರು ಎಂಬ ಮಾತು ವಿಧಿವಾದವನ್ನು ಎತ್ತಿಹಿಡಿಯುವಂತೆ ಕಾಣುತ್ತದೆ. ಆದರೆ ಇದು ಹಣೆಯ ಬರಹಕ್ಕೆ ಶರಣಾಗುವ ಅಸಹಾಯಕ ಸ್ಥಿತಿಯಲ್ಲ ಅದನ್ನು ಮೀರಿ ನಿಲ್ಲುವ ಏಕೈಕ ನಿಷ್ಠೆಯ ನಿಲವು ಎಂದು ಹೇಳಿದ್ದಾರೆ.

ಹನ್ನೆರಡನೇ ಶತಮಾನದ ಕ್ರಾಂತಿಯ ನೇತಾರನೆನಿಸಿ ಸರ್ವಸಮಾನತೆಯನ್ನು ಸಾಧಿಸಲು ಹೆಣಗಿದ ಬಸವಣ್ಣನವರು ಯುಗ ಪುರುಷರೇ ಸರಿ. ತಮ್ಮ ಕಾಲದಲ್ಲಿದ್ದ ಮೂಢ ನಂಬಿಕೆಗಳನ್ನು ಮೂಲೋತ್ಪಾಟನ ಮಾಡಿ ಮರ್ತ್ಯಕ್ಕೆ ಮಹವ ತರುವಲ್ಲಿ ಶ್ರಮಿಸಿ ಮಹಾನುಭಾವ ಬಸವಣ್ಣನವರು ಪಾತ್ರ ಸ್ಮರಣೀಯರು. ತಮ್ಮ ಸುತ್ತಮುತ್ತಣ ಸಮಾಜದಲ್ಲಿದ್ದ ಬಹು ದೇವೋಪಾಸನೆ ಜಾತಿ–ಮತ ಬೇಧ, ಸ್ತ್ರೀ–ಪುರುಷ ಬೇಧ ಮೂಡನಂಬಿಕೆಗಳು, ಅಂಧ ಆಚರಣೆಗಳನ್ನು ಖಂಡಿಸಿ ಜನರನ್ನು ಸುಮಾರ್ಗದಲ್ಲಿ ನಡೆಸಿಕೊಂಡು ಹೋಗಲು ಶ್ರಮಿಸಿದವರು. ಮೇಲು–ಕೀಳುಗಳೆಂಬ ಬೇಧವನ್ನು ಹೋಗಲಾಡಿಸಿ "ಮಾನವ ಜಾತಿ ತಾನೊಂದೆವಲಂ" ಎಂಬ ಆರ್ಷೇಯಕ ವಾಣಿಯನ್ನು ಕೃತಿಗಿಳಿಸಲು ಶ್ರಮಿಸಿದ ಮಹಾವ್ಯಕ್ತಿ ಬಸವಣ್ಣನವರು.

ಸರ್ವಜ್ಞನು ಬಸವಣ್ಣನವರಂತೆ ವಿಚಾರವಾದಿ, ಅನುಭಾವಿ, ಸಮಾಜ ವಿಮರ್ಶಕ ಮತ್ತು ಕ್ರಾಂತಿಕಾರಕ ನಡೆನುಡಿಗಳ ಸಾಮರಸ್ಯವನ್ನು ಸಾರಿದವನು.[೧] "ವಚನ ಶಾಸ್ತ್ರದಲ್ಲಿರುವಂತೆ ಇವನ ಮಾತಿನಲ್ಲಿ ಜಾಣ್ಮೆಯ ಮೋಹಕತೆಯು ಮಿಗಿಲಾಗಿವೆ. ಒಟ್ಟಿನಲ್ಲಿ ಸರ್ವಜ್ಞನು ವಚನಕಾರರಲ್ಲಿರುವ ಸದ್ಗುಣಗಳನ್ನೊಳಗೊಂಡು ಅವರಲ್ಲಿಲ್ಲದಿರುವ ಕೆಲವು ಮಿಗಿಲಾದ ಗುಣಗಳನ್ನು ಪಡೆದು ರಸಭರಿತವೂ, ಅನ್ಯಾದೃಶ್ಯವೂ ಆದ ಕನ್ನಡ ವಚನಗಳಿಂದ ತನ್ನದೇ ಆದ ಸುಶೈಲಿಯಿಂದ ಸಕಲ ಕನ್ನಡಿಗರನ್ನೂ ತನ್ನ ಮಾತಿನ ಮಂತ್ರದಿಂದ ವಶೀಕರಿಸಿದ್ದಾನೆಂದು ಹೇಳಬಹುದು" ಎಂದು ಕೀರ್ತನ ಕೇಸರಿ ಬಿ.ಶಿವಮೂರ್ತಿಶಾಸ್ತ್ರಿಗಳು ಅತ್ಯುತ್ಸಾಹದಿಂದ ಪ್ರಶಂಸಿದ್ದಾರೆ.[೨]

---

೧. ಸರ್ವಜ್ಞ ಕವಿ– ಜೀವನ ಹಾಗೂ ಕಾವ್ಯ, ಡಾ.ಆರ್.ಸಿ.ಹಿರೇಮಠ, ಪುಟ ೩೬.

೨. ಸರ್ವಜ್ಞಮೂರ್ತಿ– ಕವಿ ಕಾವ್ಯ ವಿಮರ್ಶೆ, ಬಿ.ಶಿವಮೂರ್ತಿಶಾಸ್ತ್ರಿಗಳು, ಪುಟ ೩೦.

# ಉಪಸಂಹಾರ

ಬಸವಣ್ಣ ಮತ್ತು ಸರ್ವಜ್ಞರು ಸಮಾಜದ ಉದ್ಧಾರವನ್ನು ಬಯಸಿದ ಮಹಾನ್ ಚಿಂತಕರು ಇವರಿಬ್ಬರ ಸಾಮಾಜಿಕ ಪ್ರಜ್ಞೆಯಲ್ಲಿ ಬಹುಪಾಲು ಸಾಮ್ಯತೆಗಳೂ ಕೆಲವು ಭಿನ್ನತೆಗಳೂ ಇವೆ. ಬಸವಣ್ಣ ಹಾಗೂ ಸರ್ವಜ್ಞ ರಿಬ್ಬರೂ ತಮ್ಮ ವಚನಗಳನ್ನು ತಮ್ಮ ಕಾಲದ ಸಮಾಜದ ಬಗೆಗೆ ಪ್ರತಿಕ್ರಿಯಿಸಿದ್ದಾರೆ.

ಬಸವಣ್ಣನವರು ಇಂದಿನ ಭಾರತೀಯ ಸಮಾಜಕ್ಕೆ ತೀರ ಅವಶ್ಯವೆಂದು ತೋರುತ್ತಾರೆ ಪತಿತೋದ್ಧಾರಕ್ಕಾಗಿ ಪಣತೊಟ್ಟು ಹೆಣಗುತ್ತಿರುವ ಇಂದಿನ ಭಾರತೀಯ ಸಮಾಜ ಬಸವಣ್ಣನವರ ಆದರ್ಶಗಳನ್ನು ಮುಂದಿಟ್ಟುಕೊಟ್ಟು ಕೊಳ್ಳುವುದು ಅವಶ್ಯವಿದೆ. ಅವರ ವಚನಗಳಲ್ಲಿ ಕಾಣುವ ಮಾನವೀಯ ಸ್ಪಂದನೆ ವಿಶ್ವವನ್ನೇ ಬೆರಗುಗೊಳಿಸುತ್ತದೆ. ಸಮಾಜ ವಿಮರ್ಶೆ ಬಸವಣ್ಣನವರ ವಚನಗಳ ಮತ್ತೊಂದು ಮುಖವಾಗಿದೆ. ಅನ್ಯಾಯವನ್ನು ಪ್ರತಿಭಟಿಸುವ ನ್ಯಾಯವನ್ನು ಪ್ರತಿಪಾದಿಸುವ ಅವನದು ರಚನಾತ್ಮಕ ವಿಮರ್ಶೆಯಾಗಿದ್ದು ಅಲ್ಲಿ ಒಬ್ಬ ಸಮಾಜ ವಿಜ್ಞಾನಿಯ ವೈಜ್ಞಾನಿಕ ದೃಷ್ಟಿ ಎದ್ದು ಕಾಣುತ್ತದೆ. ಕೆಲವೊಮ್ಮೆ ಅನ್ಯಾಯವನ್ನು ಸಾಮಾನ್ನೀಕರಿಸಿ ಮಾತನಾಡದೆ "ಆನೀ ಬಿಜ್ಜಳಂಗೆ ಅಂಜುವನೆ ಅಯ್ಯಾ" ಎಂದು ವ್ಯಕ್ತಿಯನ್ನು ಬೆರಳು ಮಾಡಿ ಆಡುವುದು "ಬಿಜ್ಜಳನ ಭಂಡಾರವೆನಗೇಕಯ್ಯಾ" ಎಂದು ತನ್ನ ಮೇಲಿನ ವ್ಯಕ್ತಿಗತ ಆರೋಪವನ್ನು ನಿರಾಕರಿಸುವುದು ಇದರ ಜೊತೆಗೆ 'ದಯವೇ ಧರ್ಮದ ಮೂಲ, ಸತ್ಯವ ನುಡಿವುದೇ ಸ್ವರ್ಗ' – ಮೊದಲಾದ ಲೋಕಸಂದೇಶಗಳಂತೂ ಹೆಜ್ಜೆ ಹೆಜ್ಜೆಗೆ ಕೇಳಿಸುತ್ತವೆ. ಹೀಗೆ ಅವನ ಆತ್ಮ ವಿಮರ್ಶೆ, ಸಮಾಜವಿಮರ್ಶೆಯ ವಚನಗಳು ಕ್ರಮವಾಗಿ ಆಧುನಿಕ ನವ್ಯಕಾವ್ಯ, ಬಂಡಾಯದ ಕಾವ್ಯಗಳನ್ನು ನೆನಪಿಸುತ್ತವೆ. ಲೋಕ ಸಂದೇಶದ ವಚನಗಳು ಭಾವಗೀತೆಗಳಂತೆ ಕಾಣುತ್ತವೆ. ಇಂಥ ಅಭಿವ್ಯಕ್ತಿಗಳಿಂದಾಗಿ ಬಸವಣ್ಣ ಲೋಕದ ಮಾನವನಾಗಿ ಅದೇ ಕಾಲಕ್ಕೆ ಸಮಾಜ ವ್ಯಕ್ತಿಯಾಗಿ ಇಂದಿಗೂ ನಮ್ಮ ಕಣ್ಣ ಮುಂದೆ ಬರುತ್ತಾನೆ.

ಸರ್ವಜ್ಞನಲ್ಲಿ ವಚನಕಾರರಂತೆ ಕೆಲವು ಗುಣಗಳಿವೆ. ಉದಾರವಾದ ಭಾವಗಳಿವೆ, ವಚನಕಾರರಲ್ಲಿರುವ ಭಕ್ತಿ, ಭಕ್ತ ಭೇದವೂ, ಅನ್ಯಮತ ತಿರಸ್ಕಾರವೂ ಇವನಲ್ಲಿಲ್ಲ. ಸರ್ವಜ್ಞನು ವಚನಕಾರರಂತೆ ಲೋಕಾನುಭವವನ್ನು ಪಡೆದವನು. ಇವನಲ್ಲಿ ರಸಿಕತೆ, ವಿಶಾಲತೆ, ಉದಾರತೆಗಳು ಬಹಳವಾಗಿವೆ. ಬಹುಶ್ರುತತ್ವದಲ್ಲಿ ಇವನು ಯಾವ ವಚನಕಾರನಿಗೂ ಕಡಿಮೆಯಾದವನಲ್ಲ. ಜೀವನದ ಬಗ್ಗೆ ಅವನು ಮಾಡಿರುವ

ವಿಮರ್ಶೆ ಅವನ ತ್ರಿಪದಿಗಳಲ್ಲಿ ಕಂಡುಬರುತ್ತದೆ. ಜೀವನವನ್ನು ಸಾಕ್ಷಿಯಾಗಿ ನೋಡಿ ವ್ಯಾಖ್ಯಾನಿಸುವ ಕನ್ನಡದ ಅತಿ ವಿರಳ ಚಿಂತಕನಾಗಿಯೂ ತೋರುತ್ತಾನೆ. ಅಂತೆಯೇ ಬಸವಣ್ಣ ಸಾಮಾನ್ಯರಿಗೂ ಅರ್ಥವಾಗುವುದು ಅವನ ಸರಳತೆ ಮತ್ತು ನೇರವಾದ ನಡೆ-ನುಡಿಗಳಿಂದ, ಪ್ರಾಮಾಣಿಕತೆಯಿಂದ, ಅವನ ವೈಚಾರಿಕತೆಯು ಯಾವುದೇ ಆಲೋಚನಾ ದೃಷ್ಟಿಯಿಂದಲೂ ಆಧುನಿಕವಾಗಿರುವುದಕ್ಕೆ ಕಾರಣ ಅವನ್ನು ವಸ್ತುನಿಷ್ಠವಾಗಿ ನೋಡುವ ದೃಷ್ಟಿಯಿಂದ ಸಾಮಾನ್ಯರಿಗೆ ಅವನು ಪೂಜ್ಯ-ನಾಗುವಂತೆಯೇ ಬುದ್ಧಿಜೀವಿಗಳಿಗೆ ಶ್ರೇಷ್ಠ ವೈಚಾರಿಕ ವ್ಯಕ್ತಿಯಾಗುತ್ತಾನೆ. ಸಾಹಿತ್ಯಕ್ಕೆ ಕವಿ, ಕನ್ನಡ ನಾಡಿನ ಸಾಂಸ್ಕೃತಿಕ, ಧಾರ್ಮಿಕ ಇತಿಹಾಸಕ್ಕೆ, ಹೊಸ ತಿರುವನ್ನು ಕೊಟ್ಟು ಪ್ರಮುಖ ವ್ಯಕ್ತಿಯಾಗಿ ಕಾಣುತ್ತಾನೆ.

# ಪರಾಮರ್ಶನ ಗ್ರಂಥಗಳು

೧. ಬಸವಣ್ಣನವರ ವಚನಗಳು; ಡಾ. ಎಲ್. ಬಸವರಾಜು, ಗೀತಾಬುಕ್ ಹೌಸ್, ಮೈಸೂರು, ೨೦೦೦.

೨. ಭಕ್ತಿಭಂಡಾರಿ ಬಸವಣ್ಣನವರ ವಚನಗಳು; ಡಾ. ಆರ್.ಸಿ.ಹಿರೇಮಠ, ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ, ೧೯೬೮.

೩. ಬಸವಣ್ಣನವರ ವಚನಗಳು; ಡಾ. ಎಂ.ಎಂ.ಕಲಬುರ್ಗಿ, ಸಂಪುಟ-೧, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೯೩.

೪. ಬಸವ ಪುರುಷ; ಡಾ. ಹಾ.ಮಾ.ನಾಯಕ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ವಿಶ್ವವಿದ್ಯಾನಿಲಯ, ೧೯೭೫.

೫. ಬಸವ ವಚನಾಮೃತ; ಡಾ. ಎಲ್. ಬಸವರಾಜು, ಬಸವ ಸಮಿತಿ, ಬೆಂಗಳುರು, ೧೯೬೬.

೬. ಬಸವ ಪಥ ; ಬಸವ ಸಮಿತಿ, ಶ್ರೀ ಬಸವೇಶ್ವರ ವೃತ್ತ, ಬೆಂಗಳೂರು, ೨೦೦೫.

೭. ಹೆಣ್ಣು ; ಸರ್ವಜ್ಞನ ದೃಷ್ಟಿಯಲ್ಲಿ ; ಕೆ.ಆರ್.ಮೂರ್ತಿ, ಜನಪದ ಪ್ರಕಾಶನ, ಬೆಂಗಳೂರು, ೨೦೦೬.

೮. ಕನ್ನಡ ಸಾಹಿತ್ಯ ಚರಿತ್ರೆ ಸಂಪುಟ ೨, ೪ ; ಸಂ. ಡಾ. ಹಾ.ಮಾ.ನಾಯಕ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ೧೯೭೭.

೯. ಮರುಚಿಂತನೆ; ಕೆ.ಜಿ.ನಾಗರಾಜಪ್ಪ, ಪ್ರಣತಿ ಪ್ರಕಾಶನ, ತುಮಕೂರು, ೧೯೮೮.

೧೦. ಮಧ್ಯಕಾಲೀನ ಭಕ್ತಿ ಮತ್ತು ಅನುಭಾವ ಸಾಹಿತ್ಯ ಹಾಗೂ ಚಾರಿತ್ರಿಕ ಪ್ರಜ್ಞೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೮.

೧೧. ಶ್ರೀ ಬಸವೇಶ್ವರ ವಚನಾಮೃತ; ಸಂಪಾದಕರು ಡಾ. ಆರ್.ಸಿ.ಹಿರೇಮಠ, ಪ್ರಕಾಶಕರು ರುದ್ರಾಕ್ಷಿಮಠ, ನಾಗನೂರು, ೧೯೯೬.

೧೨. ಸರ್ವಜ್ಞನ ವಚನಗಳು; ಡಾ. ಎಲ್.ಬಸವರಾಜು, ಗೀತಾಬುಕ್ ಹೌಸ್, ಮೈಸೂರು, ೨೦೦೨.

೧೩. ಸರ್ವಜ್ಞನ ವಚನಗಳು ; ಸಂ. ಉತ್ತಂಗಿ ಚನ್ನಪ್ಪ, ಸಾಹಿತ್ಯ ಮತ್ತು ಸಂಸ್ಕೃತಿ, ಅಭಿವೃದ್ಧಿ ಇಲಾಖೆ, ಪ್ರಕಟಣೆ, ೧೯೬೦.

೧೪. ಸರ್ವಜ್ಞನ ವಚನಗಳು ; ಸಂ. ರಾಗೌ, ಕನ್ನಡ ಪುಸ್ತಕ ಪ್ರಾಧಿಕಾರ, ೨೦೦೩.

೧೫. ಸರ್ವಜ್ಞ ಒಂದು ಸಮೀಕ್ಷೆ ; ಡಾ. ಜಿ.ಎಸ್.ಶಿವರುದ್ರಪ್ಪ, ಬೆಂಗಳೂರು ವಿಶ್ವವಿದ್ಯಾನಿಲಯ, ೧೯೭೫.

೧೬. ಸರ್ವಜ್ಞನ ಸಮಾಜ ದರ್ಶನ ಮತ್ತು ಸಾಹಿತ್ಯ ಸತ್ವ ; ಡಾ. ಎಂ.ಅಬಕರ ಅಲಿ, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ೧೯೮೩.

೧೭. ಸರ್ವಜ್ಞನ ವಚನಗಳು ; ಸಂ. ಉತ್ತಂಗಿ ಚನ್ನಪ್ಪ, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ೨೦೦೪.

೧೮. ಸರ್ವಜ್ಞನ ವಚನಗಳು ; ಡಾ.ಎಚ್.ತಿಪ್ಪೇರುದ್ರಸ್ವಾಮಿ, ೧೯೭೫.

೧೯. ಸರ್ವಜ್ಞನ ವಚನಗಳು ; ಒಂದು ಜಾನಪದೀಯ ಅಧ್ಯಯನ, ಡಾ. ರಾಜಶೇಖರ ಜಮದಂಡಿ, ಅ.ಭಾರತ, ಶರಣ ಸಾಹಿತ್ಯ ಪರಿಷತ್ತು, ಮೈಸೂರು, ೨೦೦೪.

೨೦. ಸರ್ವಜ್ಞನ ವಚನ ಸಂಪದ ; ಮಾಗಡಿ ರಂಗನರಸಿಂಹಯ್ಯ, ವಿಜಯವಾಹಿನಿ ಪಬ್ಲಿಕೇಷನ್ಸ್, ಶಿವಮೊಗ್ಗ, ೨೦೦೭.

೨೧. ಸರ್ವಜ್ಞ ಕವಿ ; ಎ.ಆರ್.ಕೃಷ್ಣಶಾಸ್ತ್ರಿ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ ಪ್ರಚಾರ ಪುಸ್ತಕಮಾಲೆ – ೨೯, ೧೯೯೯.

೨೨. ಸಾಹಿತ್ಯಾಲೋಕ; ಎಂ.ಆರ್.ಶ್ರೀನಿವಾಸಮೂರ್ತಿ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ೧೯೭೮.

೨೩. ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ ; ಡಾ. ಎಂ.ಚಿದಾನಂದಮೂರ್ತಿ, ೨೦೦೯, ಸಂಪುಟ ೫.

೨೪. ಶರಣ ಅನುಭಾವ ಸಾಹಿತ್ಯ ; ಡಾ. ಹೆಚ್.ತಿಪ್ಪೇರುದ್ರಸ್ವಾಮಿ, ಡಿ.ವಿ.ಕೆ.ಮೂರ್ತಿ, ಮೈಸೂರು, ೧೯೬೩.

೨೫. ವಚನ ಧರ್ಮಸಾರ ; ಎಂ.ಆರ್. ಶ್ರೀನಿವಾಸಮೂರ್ತಿ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ೧೯೭೭.

೨೬. ವಚನ ಚಳವಳಿ ; ಡಾ. ಎಚ್.ತಿಪ್ಪೇರುದ್ರಸ್ವಾಮಿ, ಶ್ರೀ ಶರಣಬಸವೇಶ್ವರ ಗ್ರಂಥಾಲಯ, ಗುಲ್ಬರ್ಗ ವಿಶ್ವವಿದ್ಯಾಲಯ, ೧೯೮೭.

೨೭. ವೀರಶೈವ ಧರ್ಮದರ್ಶನ ; ಡಾ. ಯು.ಆರ್.ಅನಂತಮೂರ್ತಿ, ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು, ೨೦೦೩.

## ಪರಾಮರ್ಶನ ಲೇಖನಗಳು

೧. ಚುಟುಕ ಕವಿ ಸರ್ವಜ್ಞ , ಎಚ್ಚೆಸ್ಕೆ

೨. ಜಂಗಮ ಕವಿ ಸರ್ವಜ್ಞ , ಪ್ರೊ. ರಾಗೌ

೩. ಸರ್ವಜ್ಞನ ತ್ರಿಪದಿಗಳಲ್ಲಿ ಪ್ರತಿರೋಧ, ಡಾ. ರಾಜಶೇಖರ ಜಮದಂಡಿ

೪. ಸರ್ವಜ್ಞನ ಸಂದೇಶ, ಡಾ. ಸಿ.ಪಿ.ಕೆ.

೫. ಸರ್ವಜ್ಞ, ವಿ.ಸೀ.

